**Statement about ownership of CHANDAMAMA (Kannada)**
**Rule 8 (Form VI), Newspapers (Central) Rules, 1956**

1. *Place of Publication* ... 'Chandamama Buildings' 188, Arcot Road Vadapalani, Madras-600 026
2. *Periodicity of Publication* ... Monthly ... 1st of each calendar month
3. *Printer's Name* ... B. V. Reddi
   *Nationality* ... Indian
   *Address* ... Prasad Process Private Limited 188, Arcot Road, Vadapalani Madras-600 026
4. *Publisher's Name* ... B. Viswanatha Reddi
   *Nationality* ... Indian
   *Address* ... Chandamama Publications 188, Arcot Road, Vadapalani Madras-600 026
5. *Editor's Name* ... B. Nagi Reddi
   *Nationality* ... Indian
   *Address* ... 'Chandamama Buildings' 188, Arcot Road, Vadapalani Madras-600 026
6. *Name & Address of individuals who own the paper* ... Chandamama Children's trust Fund Beneficieries:
   1. B. V. Naresh
   2. B. V. L. Arathi
   3. B. L. Nirupama
   4. B. V. Sanjay.
   5. B. V. Sharath
   6. B. N. Rajesh
   7. B. Archana
   8. B. N. V. Vishnu Prasad
   9. B. L. Aradhana
   10. B. Nagi Reddi (Jr)

All Minors, by Trustee:
M. Uttama Reddi, 14, V. O. C. Street, Madras-600 024

I, B. Viswanatha Reddi, hereby declare that the particulars given above are true to the best of my knowledge and belief.

*1st March* 1983

**B. VISWANATHA REDDI**
*Signature of the Publisher*




## An Appeal to the Readers

We have always resisted the idea of a price increase for your magazine. We have done so only when circumstances have left no option for us and that too with the greatest hesitation, for it has been a matter of policy with us not to pinch the purses of our young, devoted readers.

A contingency has arisen again now after two years. The rapid increase in the cost of production in the recent months has compelled us to slightly enhance the price of CHANDAMAMA in all languages from the issues dated April 1983. The magazines will be available for Rs.2.00 per copy.

We had to take this step, reluctantly again, as we did not like to reduce the content or make any compromise on its quality. We are sure, you will view the situation with sympathy and understanding.

—Publishers

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ


---

## ಪಾಠಕರಲ್ಲಿ ವಿಜ್ಞಾಪನೆ

'ಚಂದಮಾಮ' ಪತ್ರಿಕೆಯ ಕಾರ್ಯವನ್ನು ನಿರ್ವಹಿಸುವುದರಲ್ಲಿ ಮುಖ್ಯವಾಗಿ ಪ್ರಕಾಶನಕ್ಕೆ ಸಂಬಂಧಿಸಿದ ಎಲ್ಲಾ ವಸ್ತುಗಳ ಬೆಲೆಯೂ ಸ್ವಲ್ಪ ಕಾಲದಿಂದ ವಿಪರೀತವಾಗಿ ಏರುತ್ತಾ ಇವೆ. ಆದರೂ ಪತ್ರಿಕೆಯ ಬೆಲೆಯುನ್ನು ಹೆಚ್ಚಿಸಿ, ಆ ಭಾರವನ್ನು ಪಾಠಕರ ಮೇಲೆ ಹಾಕದಿರಲು ಇತ್ತೀಚಿನ ಕಾಲದಲ್ಲಿ ಸಾಧ್ಯವಾದಷ್ಟೂ ತಡೆದು ನೋಡಿದೆವು.

ಪ್ರಸ್ತುತ ಪರಿಸ್ಥಿತಿಯಿಂದ ಇನ್ನು ಹಾಗೆ ಪತ್ರಿಕೆ ನಡೆಸಲು ಸಾಧ್ಯವಿಲ್ಲದಂತಾಗಿ, ಈ ಸಂಚಿಕೆಯಿಂದ ಬೆಲೆಯುನ್ನು ಎರಡು ರೂಪಾಯಿ ಮಾಡಲೇ ಬೇಕಾಯಿತು. ಇಪ್ಪತ್ತೈದು ಪೈಸೆ ಮಾತ್ರವೇ ಹೆಚ್ಚಿಸಿದ್ದೇವೆ.

ಪ್ರಿಯರೂ, ಅಭಿಮಾನಿಗಳೂ ಆದ ಪಾಠಕರೂ, ಏಜಂಟರೂ ಸುಹೃದಯದಿಂದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಎಂದಿನಂತೆ ಸಹಕಾರ ನೀಡುವರೆಂದು ನಂಬುತ್ತೇವೆ.

---


ಸಂಪುಟ : ೭೦ ಏಪ್ರಿಲ್ '೮೩ ಸಂಚಿಕೆ : ೪

ಬಿಡಿ ಪ್ರತಿ ರೂ. ೧-೦೦ : : ವಾರ್ಷಿಕ ಚಂದಾ ರೂ. ೧೪-೦೦









# ಗುರುವಿಗೆ ಪಾಠ

**ಒಂದು** ಊರಿನಲ್ಲಿ ರಮಾನಂದನೆಂಬ ಹುಡುಗನಿದ್ದನು, ಅವನ ತಂದೆ ಸಾಧಾರಣದ ಒಬ್ಬ ಬಡರೈತ, ಆದುದರಿಂದ ಅವನು ಗ್ರಾಮದೊಳಗೆ ತನಗಿರುವ ಚಿಕ್ಕ ಹೊಲದಲ್ಲೇ ಕಾಯಕಷ್ಟ ಮಾಡಿಕೊಂಡು, ತನ್ನ ಮಗನನ್ನೂ ಹಾಗೆಯೇ ಬೆಳೆಸಲು ನೋಡಿದನು, ಆದರೆ ರಮಾನಂದನಿಗೆ ವಿದ್ಯೆಕಲಿಯಲು ಬಹಳ ಆಶೆಯಾಗಿತ್ತು. ಅವನ ಆಶೆಯಂತೆಯೇ ನಡೆಯಲು ಬಿಡುವುದು ಒಳ್ಳೆಯದೆಂದು ಊರ ಹಿರಿಯರು ಹೇಳಿದುದರಿಂದ, ತಂದೆ ರಮಾನಂದನನ್ನು ಬಹು ದೂರವಿರುವ ಗುರುಕುಲಕ್ಕೆ ಕಳುಹಿಸಿಕೊಟ್ಟನು. ರಮಾನಂದನಿಗೆ ಇಪ್ಪತ್ತು ವರ್ಷ ಪ್ರಾಯವಾಗಲು ಎಲ್ಲಾ ಶಾಸ್ತ್ರಗಳಲ್ಲಿಯೂ ಪ್ರವೀಣನಾದನು.

ಒಂದು ದಿನ ಗುರುಗಳು ರಮಾನಂದನನ್ನು ಹತ್ತಿರ ಕೂಡಿಸಿಕೊಂಡು, “ನೋಡಪ್ಪಾ, ನಿನ್ನ ವಿದ್ಯಾಭ್ಯಾಸವು ಮುಗಿಯಿತು. ನೀನು ಎಲ್ಲದರಲ್ಲಿ ಒಳ್ಳೆಯ ತಿಳುವಳಿಕೆಯುಳ್ಳವನು. ಹಣಕ್ಕಾಗಿ ಆಶೆಪಡದೆ ಗ್ರಾಮಗಳಲ್ಲಿರುವ ಪಾಮರ ಮಕ್ಕಳಿಗೆ ವಿದ್ಯಾದಾನ ಮಾಡು. ಅಭಿಮಾನದಿಂದ ಗ್ರಾಮಸ್ಥರು ತಮ್ಮ ಶಕ್ತ್ಯಾನುಸಾರವಾಗಿ ಏನು ಕೊಟ್ಟರೂ ತೆಗೆದುಕೊಂಡು ತೃಪ್ತನಾಗು.” ಎಂದು ಹೇಳಿ ಹರಸಿದನು.

"ಗುರುವರ್ಯಾ, ನೀವು ಹೇಳಿದ ಹಾಗೆಯೇ ನಡೆದುಕೊಳ್ಳುತ್ತೇನೆ. ನೀವು ಯಾವ ಗ್ರಾಮಕ್ಕೆ ಹೋಗಲು ಹೇಳುವಿರೋ ಅಲ್ಲಿಗೇ ಮೊದಲು ಹೋಗಿ, ಕೆಲಸ ಮಾಡಿ, ಒಂದು ವರ್ಷದ ನಂತರವೇ ಊರಿಗೆ ಹೋಗುತ್ತೇನೆ" ಎಂದನು ರಮಾನಂದ.

“ಹಾಗೆಯೇ ಮಾಡು. ಯಾವ ಗ್ರಾಮಕ್ಕಾದರೂ ಹೋಗಬಹುದು. ಆದರೆ ಅಪ್ಪಿತಪ್ಪಿ ಮೂರ್ಖಪುರಕ್ಕೆ ಮಾತ್ರ ಹೋಗಬೇಡ.” ಎಂದರು ಗುರುಗಳು.

ರಮಾನಂದನು ಗುರುಕುಲಾಶ್ರಮವನ್ನು ಬಿಟ್ಟು ಹೊರಟನು. ಅವನ ಅದೃಷ್ಟವೋ ದುರದೃಷ್ಟವೋ, ಆ ದಿನ ಕತ್ತಲಾಗುವ ಹೊತ್ತಿಗೆ ಅವನು ಯಾವ ಊರನ್ನು ತಲಪಿದನೋ ಅದು ಮೂರ್ಖಪುರವೇ ಆಗಿತ್ತು. ಈ ಸಂಗತಿ ಗೊತ್ತಾಗುವಾಗ ರಾತ್ರಿಯಾಗಿ ಹೋದುದರಿಂದ ರಾತ್ರಿಯನ್ನು ಅಲ್ಲಿ ಕಳೆಯದೆ ಬೇರೆ ದಾರಿ ಇರಲಿಲ್ಲ. ಅಲ್ಲಿ ಒಬ್ಬ ಗೃಹಸ್ಥನ ಮನೆಯಲ್ಲಿ ಆಶ್ರಯ ಸಿಕ್ಕಿತು.

ಗೃಹಸ್ಥನು ಆವನನ್ನು ಮಾತಾಡಿಸುತ್ತಾ, “ಯಾರು ನೀನು ಹುಡುಗಾ ?” ಎಂದು ವಿಚಾರಿಸಿದನು.

“ ವಸುಂಧರ ”

ರಮಾನಂದನು ತಾನು ಯಾರು ಏನೆಂಬುದನ್ನೆಲ್ಲಾ ಹೇಳಿದನು, ಅದನ್ನು ಕೇಳಿ ಗೃಹಸ್ಥನು ಅವನಿಗೆ ನಮಸ್ಕಾರ ಮಾಡಿ, "ನಿನ್ನಿಂದ ನಮ್ಮ ಗ್ರಾಮಕ್ಕೆ ಉಪಕಾರವಾಗಬೇಕಪ್ಪಾ. ಚೆನ್ನಾಗಿ ಓದಿಕೊಂಡವರಿಗೆ ಕೈಮುಗಿಯಬೇಕೆಂದು ಶಾಸ್ತ್ರಗಳು ಹೇಳುತ್ತವೆ. ಚಿಕ್ಕವನಾದರೂ ವಂದಿಸುತ್ತೇನೆ. ಈ ಊರಿನಲ್ಲಿ ಸರಿಯಾದ ಗುರುವಿಲ್ಲದೆ ಮಕ್ಕಳೆಲ್ಲ ಕೆಟ್ಟು ಹೋಗುತ್ತಿದ್ದಾರೆ. ನೀನು ಇಲ್ಲಿಯ ಮಕ್ಕಳಿಗೆ ವಿದ್ಯೆ ಕಲಿಸಬೇಕು" ಎಂದನು,

ತನ್ನ ಗುರುಗಳು ಹೇಳಿದ ಮಾತನ್ನು ನೆನಪಿನಲ್ಲಿಟ್ಟು ಕೊಂಡಿದ್ದ ರಮಾನಂದನು, ಆ ಊರಿನಲ್ಲಿರಲು ಸಾಧ್ಯವಿಲ್ಲವೆಂದೇ ಹೇಳಿದನು. ಆದರೆ ಮರುದಿನ ಈ ಗೃಹಸ್ಥನ ಮನೆಗೊಬ್ಬ ವಿದ್ಯಾವಂತನು ಬಂದಿರುವ ನೆಂದು ತಿಳಿದು, ಊರೊಳಗಿನ ಅನೇಕರು ಬಗೆಬಗೆಯ ಕಾಣಿಕೆಗಳೊಡನೆ ಬಂದು, ರಮಾನಂದನು ತಮ್ಮ ಮಕ್ಕಳಿಗೆ ಓದುಬರೆಹ ಕಲಿಸಬೇಕೆಂದು ಕೇಳಿಕೊಂಡರು,

ಆ ಕಾಣಿಕೆಗಳನ್ನು ನೋಡಿ, ವಿದ್ಯೆಯ ಮೇಲೆ ಆ ಊರಿನವರಿಗಿರುವ ಆಸ್ಥೆಯನ್ನು ತಿಳಿದು, ಅವರ ಕೋರಿಕೆಯನ್ನು ನಿರಾಕರಿಸಲು ರಮಾನಂದನಿಗೆ ಮನಸ್ಸು ಬರಲಿಲ್ಲ, ತನ್ನ ಗುರುಗಳು ಹೇಳಿದ ಎಚ್ಚರಿಕೆ, ಎಂದೋ ಅವರು ಅನುಭವಿಸಿದುದರ ಫಲವಾಗಿರ ಬೇಕು. ಈಗ ಇಲ್ಲಿಯವರು ಪರಿವರ್ತನೆ ಗೊಂಡಿರಬಹುದು.

ಹೀಗೆ ಯೋಚಿಸಿ ರಮಾನಂದನು ಆ ಊರಿನಲ್ಲೇ ನಿಲ್ಲಲು ನಿರ್ಧರಿಸಿದನು. ಗ್ರಾಮಾಧಿಕಾರಿ ರಮಾನಂದನಿ ಗಾಗಿ ಒಂದು ಚಿಕ್ಕಮನೆಯನ್ನು ಏರ್ಪಡಿಸಿ ಕೊಟ್ಟನು. ರಮಾನಂದನು ಪಾಠಶಾಲೆಯನ್ನು ಪ್ರಾರಂಭಿಸುವುದಕ್ಕೆ ಮೊದಲು ಗ್ರಾಮಾಧಿಕಾರಿ ಅವನೊಂದಿಗೆ "ನೋಡಯ್ಯಾ. ನಿನ್ನ ಶಾಲೆ ಸರಿಯಾಗಿ ನಡೆಯದೇ ಹೋದ ಪಕ್ಷದಲ್ಲಿ ನೀನು, ಅಗೋ, ಅಲ್ಲಿ ಕಾಣುವ ದೊಡ್ಡ ಮನೆಯೊಳಗೆ ಇರಬೇಕಾಗುತ್ತದೆ" ಎಂದು



ಹೇಳಿದನು. ರಮಾನಂದನಿಗೆ ಗ್ರಾಮಾಧಿಕಾರಿಯ ಆ ಮಾತಿನ ಅರ್ಥವೇನೆಂದು ಸ್ಪಷ್ಟವಾಗಲಿಲ್ಲ, ಬಹುಶಃ ವಿದ್ಯಾರ್ಥಿಗಳು ಹೆಚ್ಚಾಗಿ ಬಿಟ್ಟರೆ ಆ ಮನೆಯನ್ನು ಒದಗಿಸಿಕೊಡುವರೋ ಏನೋ, ಎಂದುಕೊಂಡನು.

ಶಾಲೆ ಪ್ರಾರಂಭವಾಯಿತು. ಮೂರ್ಖಪುರದ ಮಕ್ಕಳು ಬಹಳ ಪೋಲಿಗಳು, ಪೋಕರಿಗಳು, ತಂಟೆ ಕೋರರು, ಗಲಾಟೆಗಾರರು! ರಮಾನಂದನು ಎಷ್ಟು ಹೇಳಿದರೂ ಕೇಳುತ್ತಿರಲಿಲ್ಲ. ರಮಾನಂದನು ಅವರಲ್ಲಿ ಪ್ರತಿಯೊಬ್ಬನನ್ನೂ ಸೂಕ್ಷ್ಮವಾಗಿ ಗಮನಿಸಿ ನೋಡಿದನು. ಆಗ ಎಲ್ಲಾ ಹುಡುಗರೂ ದುಷ್ಟರಲ್ಲ ವೆಂದೂ, ಕೆಲವು ಹುಡುಗರು ಮಾತ್ರ ಉಳಿದವರನ್ನು ಹಾಳುಮಾಡುತ್ತಿರುವರೆಂದೂ ಗೊತ್ತಾಯಿತು. ಅಂತಹ ತುಂಟ ಹುಡಗರನ್ನು ಆರಿಸಿ ಬೇರೆ ಮಾಡಿ, ಅವರನ್ನು ಕಠಿಣವಾಗಿ ಶಿಕ್ಷಿಸಿದನು.

ಆ ದಿನ ರಾತ್ರಿಯೇ ಗ್ರಾಮಾಧಿಕಾರಿ ರಮಾನಂದನ ಬಳಿಗೆ ಬಂದು, "ಏನಯ್ಯಾ! ಕೆಲವು ಹುಡುಗರನ್ನು



ಒಂದಕ್ಷರವೂ ಬರಲಿಲ್ಲ. ಕೆಲವು ದಿನಗಳ ಮೇಲೆ ಗ್ರಾಮಾಧಿಕಾರಿ ಮತ್ತೆ ರಮಾನಂದನನ್ನು ನೋಡಿ. "ನಿನ್ನಿಂದ ಯಾವ ಹುಡುಗರಿಗೂ ಓದುಬರೆಹ ಸ್ವಲ್ಪವೂ ಬರುವುದಿಲ್ಲ ವೆಂದು ಗ್ರಾಮದಲ್ಲಿ ಎಲ್ಲರೂ ಹೇಳುತ್ತಿದ್ದಾರೆ. ಇದಕ್ಕೇನು ಹೇಳುವೆ ?" ಎಂದು ಕೇಳಿದನು. "ಯಾವ ಹುಡುಗರಿಗೂ ಓದುಬಾರದೇ ಹೋಗಲು ನಾನು ಕಾರಣವಲ್ಲ. ಆ ಹುಡುಗರ ತಂದೆ ತಾಯಿಗಳೇ ಕಾರಣ!" ಎಂದನು ರಮಾನಂದ.

"ಹಾಗಾದರೆ ಏನು ಮಾಡಬೇಕೆನ್ನುವೆ ?" ಎಂದು ಗ್ರಾಮಾಧಿಕಾರಿ ಕೇಳಿದನು.

"ಗ್ರಾಮದೊಳಗಿನ ಹಿರಿಯರನ್ನೆಲ್ಲಾ ಒಂದು ಕಡೆ ಸೇರಿಸಿರಿ. ಅವರ ಮಕ್ಕಳಿಗೆ ಚೆನ್ನಾಗಿ ವಿದ್ಯೆ ಅಂಟಿ ಕೊಳ್ಳಲು ಏನು ಮಾಡಬೇಕೆಂದು ನಾನು ಅವರಿಗೆ ಹೇಳುತ್ತೇನೆ" ಎಂದನು ರಮಾನಂದ.

ಅವನು ಹೇಳಿದ ಹಾಗೆಯೇ ಊರೊಳಗಿನ ದೊಡ್ಡವರೆಲ್ಲ ಸಮಾವೇಶರಾಗುವ ಏರ್ಪಾಡು ನಡೆಯಿತು. ರಮಾನಂದನು ಮನೆಯಲ್ಲಿ ಮಕ್ಕಳು ಹೇಗೆ ಮನೆಪಾಠ ಓದುವಂತೆ ಮಾಡಬೇಕೆಂದೂ, ಅಗತ್ಯಬಿದ್ದರೆ ಅವರನ್ನು ಹೇಗೆ ಶಿಕ್ಷಿಸಬೇಕೆಂದೂ ವಿವರಿಸಿದನು. "ಮಕ್ಕಳು ಓದುವುದೂ ಬರೆಯುವುದೂ, ಬುದ್ಧಿವಂತರಾಗಿರುವುದೂ ಎಲ್ಲವೂ ತಾಯಿ ತಂದೆಯರೇ ನೋಡಿಕೊಳ್ಳಬೇಕಾಗಿದ್ದರೆ, ಮತ್ತೆ ಶಾಲೆ ಏತಕ್ಕೆ ? ಉಪಾಧ್ಯಾಯರು ಏತಕ್ಕೆ ? ಗುರುಗಳಿಗೆ ಏನು ಕೆಲಸ ?" ಎಂದನು ಗ್ರಾಮಾಧಿಕಾರಿ.

ಅದನ್ನು ಕೇಳಿ ಅಲ್ಲಿ ಸೇರಿದ ಅನೇಕಮಂದಿ ಹಿರಿಯರಿಗೂ ಇದೇ ಸಂದೇಹ ಬಂತು. ರಮಾನಂದನ ಎಷ್ಟು ವಿವರಿಸಿದರೂ ಅವರೆಲ್ಲ ಇದೇ ಪ್ರಶ್ನೆಯನ್ನು ಮತ್ತೆ ಮತ್ತೆ ಕೇಳತೊಡಗಿದರು,

ರಮಾನಂದನು . ನಿರುಪಾಯನಾಗಿ, "ನಾನು ಎಷ್ಟು ಹೇಳಿದರೂ ನಿಮಗೆ ಅರ್ಥವಾಗುವುದಿಲ್ಲ" ಎಂದನು. ಕೂಡಲೇ ಗ್ರಾಮಾಧಿಕಾರಿ, "ದೊಡ್ಡವರಾದ

ಶಿಕ್ಷಿಸಿದೆಯಂತೆ ? ಏಕೆ ?" ಎಂದು ಕೇಳಿದನು. "ಅವರು ತುಂಟರು. ಗಲಾಟೆ ಮಾಡಿದುದಕ್ಕೇ ಹೊಡೆದೆ" ಎಂದನು ರಮಾನಂದ.

"ಹುಡುಗರು ಗಲಾಟೆ ಮಾಡದೆ ನೀನೂ ನಾನೂ ಮಾಡುತ್ತೇವೇನು ?" ಎಂದು ಗ್ರಾಮಾಧಿಕಾರಿ ಕೋಪದಿಂದ ಕೇಳಿದನು,

ಅದಕ್ಕೇನು ಉತ್ತರ ಕೊಡಬೇಕೆಂದು ರಮಾನಂದನಿಗೆ ಗೊತ್ತಾಗಲಿಲ್ಲ. ತನ್ನ ಪ್ರಶ್ನೆಯಿಂದ ಅವನು ಸುಮ್ಮ ನಿರುವುದನ್ನು ನೋಡಿ, ಗ್ರಾಮಾಧಿಕಾರಿ ನೆಮ್ಮದಿಯಾಗಿ, "ಚಿಕ್ಕಮಕ್ಕಳು ಭಗವಂತನಿಗೆ ಸಮಾನವೆಂದು ಶಾಸ್ತ್ರಗಳು ಹೇಳುತ್ತವೆ. ಅವರನ್ನು ಇನ್ನು ಮೇಲೆ ಎಂದಿಗೂ ಹೊಡೆಯಬೇಡ. ಒಳ್ಳೆಯ ರೀತಿಯಲ್ಲೇ ಕಲಿಸು" ಎಂದು ಹೇಳಿ ಹೊರಟು ಹೋದನು. ಆಮೇಲೆ ರಮಾನಂದನು ಹುಡುಗರ ಮೇಲೆ ರೇಗದೆ ಒಳ್ಳೆಯತನದಲ್ಲಿ ಕಲಿಸಬೇಕೆಂದು ಬಹಳ ಪ್ರಯತ್ನ ಮಾಡಿದನು ಅದರಿಂದ ಯಾವ ಹುಡುಗನಿಗೂ

ನಮಗೇ ಅರ್ಥವಾಗುವಂತೆ ಹೇಳಲಾಗದ ನೀನು ಮಕ್ಕಳಿಗೆ ಏನನ್ನು ಕಲಿಸಿಕೊಡುವೆ ? ನೀನು ಕೆಲವು ದಿನ ಆ ದೊಡ್ಡ ಮನೆಯಲ್ಲಿರುವುದೇ ಒಳ್ಳೇದು " ಎಂದು ಹೇಳಿದನು.

ಆ ದೊಡ್ಡ ಮನೆ ಎಂತಹುದೆಂದು ತಿಳಿಯುವ ಕುತೂಹಲ ರಮಾನಂದನಿಗೂ ಇದ್ದಿತು. ಅದಕ್ಕೆ ಒಪ್ಪಿ ಅವನು ಅಲ್ಲಿಗೆ ಹೋಗಿ ಒಳಗೆ ಕಾಲಿಟ್ಟ ಕೂಡಲೇ, ಗ್ರಾಮಾಧಿಕಾರಿ ಬಾಗಿಲು ಹಾಕಿ ಹೊರಗಿನಿಂದ ಚಿಲಕ ಸಿಕ್ಕಿಸಿಬಿಟ್ಟನು.

ಅದರೊಳಗೆ ಇನ್ನೂ ಕೆಲವರಿದ್ದರು. ಅವರಲ್ಲಿ ಒಬ್ಬನು ರಮಾನಂದನನ್ನು ನೋಡಿ, "ಓಹ್ ! ನಮಗೆ ಇನ್ನೊಬ್ಬ ಸ್ನೇಹಿತ ಬಂದನು !" ಎಂದು ಗಟ್ಟಿಯಾಗಿ ಕೂಗಿದನು.

"ನೀವು ಯಾರು ?" ಎಂದು ರಮಾನಂದನು ಅವರನ್ನು ಕೇಳಿದನು.

"ಈ ಊರಿನಲ್ಲಿ ಮಕ್ಕಳಿಗೆ ಪಾಠ ಕಲಿಸಲು ಬಂದು, ಭಂಗಪಟ್ಟವರು. ಈ ಸೆರೆ ಮನೆಯೊಳಗೆ ದಿನಾ ಕೆಲವರು ಹುಡುಗರು ಬಂದು, ಗುರುಗಳೆಂದರೆ ಹೇಗಿರಬೇಕೆಂದು ನಮಗೆ ಪಾಠ ಹೇಳುತ್ತಾರೆ. ಅವರ ಹಿಂದೆ ದೊಣ್ಣೆಯೊಂದಿಗೆ ನಾಲ್ವರು ವಸ್ತಾದುಗಳೂ ಇರುತ್ತಾರೆ." ಎಂದನು ಅವರಲ್ಲೊಬ್ಬ.

ತಾನು ತನ್ನ ಗುರುವಿನ ಮಾತು ಅಲಕ್ಷಿಸಿದುದಕ್ಕೆ ತಕ್ಕ ಶಿಕ್ಷೆ ತನಗೆ ಬಿದ್ದಿತೆಂದು ರಮಾನಂದನು ಅಂದು ಕೊಂಡನು. ಇನ್ನು ಅವರೆಲ್ಲರೊಂದಿಗೆ ಕೂಡಿ, ಅಲ್ಲಿಂದ ಹೊರಬೀಳುವ ದಾರಿ ನೋಡಬೇಕು. ಈಗ ಅವರು ಒಟ್ಟು ಹನ್ನೊಂದು ಮಂದಿಗಳಾಗಿದ್ದಾರೆ.

ಮರುದಿನ ಅಲ್ಲಿರುವ ಗುರುಗಳಿಗೆಲ್ಲ ಪಾಠ ಹೇಳಿ ಕೊಡಲು ಹುಡುಗರು ಬಂದರು. ರಮಾನಂದನು ಅವರೊಂದಿಗೆ: "ನೀವೆಲ್ಲಾ ಬಹಳ ಅದೃಷ್ಟವಂತರು. ಯಾವ ಶ್ರಮವೂ ಇಲ್ಲದೆ ಒಂದೇ ಗಂಟೆಯೊಳಗೆ ಸಕಲ ಶಾಸ್ತ್ರಗಳನ್ನೂ ಕಲಿಯುವಂತಹ ಒಂದು ಸೂತ್ರವಿದೆ. ಅದು ನಿಮಗೆಗೊತ್ತಿದೆಯೋ?" ಎಂದನು.

"ಇಲ್ಲ. ನೀವೇ ಹೇಳಿರಿ" ಎಂದನೊಬ್ಬ ಗಟ್ಟಿಗನಾದ ದೊಡ್ಡ ಹುಡುಗ.



"ಇನ್ನು ಮೇಲೆ ಇಲ್ಲಿರುವ ಹನ್ನೊಂದು ಜನ ಗುರುಗಳೆಲ್ಲಾ ಸರಸ್ವತಿಯ ನಾಮವನ್ನು ಹೇಳಿ ಕೊಂಡೇ ಇದ್ದರೆ ದೇವಿಪ್ರಸನ್ನಳಾಗಿ, ಸುತ್ತಲೂ ಇರುವವರಿಗೆಲ್ಲಾ ವಿದ್ಯಾದಾನ ಮಾಡಿಬಿಡುತ್ತಾಳೆ. ಇದು ಹನ್ನೊಂದರ ಮಹಿಮೆ! ಬೇಕಾದರೆ ಪರೀಕ್ಷಿಸಿ ನೋಡಬಹುದು" ಎಂದನು ರಮಾನಂದ.

"ಕೇಳಿ ಬರುತ್ತೇವೆ" ಎಂದು ಹೇಳಿ ಹುಡುಗರೆಲ್ಲ ಹೋಗಿ, ಊರೊಳಗಿನ ಹಿರಿಯರಿಗೆ ಆ ಸಂಗತಿ ಯನ್ನು ಹೇಳಿದರು, ಸ್ವಲ್ಪ ಹೊತ್ತಿಗೆ ಎಲ್ಲರೂ ಆ ದೊಡ್ಡ ಮನೆಗೆ ಬಂದು ದಿಮಿದಿಮಿ ಗೂಡಿದರು.

ರಮಾನಂದನು ದೊಡ್ಡ ಧ್ವನಿಯಿಂದ, "ಎಲ್ಲಿ ಮೂರ್ಖತ್ವವಿದೆಯೋ ಅಲ್ಲಿ ಸರಸ್ವತಿ ಇರಲಾರಳು, ನಾವು ಹನ್ನೊಂದು ಮಂದಿ ಗುರುಗಳೂ ಸರಸ್ವತೀ ನಾಮವನ್ನು ಸ್ತೋತ್ರ ಮಾಡುತ್ತಾ ಕಾಲಾಡಿಸಲು ಪ್ರಾರಂಭಿಸುತ್ತೇವೆ. ಸರಸ್ವತಿಯ ಕಟಾಕ್ಷಬೇಕೆಂಬವರು ನಮ್ಮ ಹಿಂದೆಯೇ ನಮ್ಮ ಹೆಜ್ಜೆಯ ಮೇಲೆ ಹಜ್ಜೆ ಇಡಬೇಡು. ಹಾಗೆ ಮಾಡದವರನ್ನು ಸರಸ್ವತಿ ಮೂರ್ಖರೆಂದು ತಿಳಿಯುತ್ತಾಳೆ" ಎಂದನು.

ಆ ಕೂಡಲೇ ರಮಾನಂದನು ಉಳಿದ ಗುರು ಗಳೊಂದಿಗೆ ದೊಡ್ಡ ಧ್ವನಿಯಿಂದ ಸರಸ್ವತಿ ನಾಮ ಸ್ತೋತ್ರವನ್ನು ಪ್ರಾರಂಭಿಸಿ ನಡೆಯಲಾರಂಭಿಸಿದರು. ಅವರ ಹಿಂದೆಯೇ ಅವರ ಹಾಗೆಯೇ ಹೇಳುತ್ತ ಮೂರ್ಖಪುರದ ನಿವಾಸಿಗಳೂ ಹೊರಟರು.

ಊರ ಹೊರಗಿನ ಮೇರೆಯನ್ನು ದಾಟಿದ ಕೂಡಲೇ ರಮಾನಂದನು, ಊರವರ ಗುಂಪನ್ನು ನೋಡಿ, "ಸರಸ್ವತೀದೇವಿ, ಶಾಸ್ತ್ರಸಾರದ ಬಿಂದಿಗೆ ಯನ್ನು ಹಿಡಿದು ಓ ಅಲ್ಲಿನಿಂತು ನಮ್ಮನ್ನು ಓಡಿ ಬರುವಂತೆ ಕರೆಯುತ್ತಿದ್ದಾಳೆ. ನೀವೆಲ್ಲಾ ಇಲ್ಲೇ ನಿಂತಿರ ಬೇಕು ಅನುತ್ತಿದ್ದಾಳೆ. ನಾವು ಹೋಗಿ ನಮ್ಮ ತಂಬಿಗೆ ಗಳಲ್ಲಿ ದೇವಿ ನೀಡುವ ವಿದ್ಯಾಸಾರವನ್ನು ತಂದು ನಿಮಗೆಲ್ಲಾ ಕೊಡುತ್ತೇವೆ. ಅದನ್ನು ತೀರ್ಥವಾಗಿ ಸೇವಿಸಿದರೆ ನೀವೆಲ್ಲಾ ವಿದ್ಯಾವಂತರಾಗುವಿರಿ!" ಎಂದು ಹೇಳಿ ಉಳಿದ ಗುರುಗಳೊಂದಿಗೆ ಓಡಿ ಹೋಗಿಬಿಟ್ಟನು.

ಹೀಗೆ ಮೂರ್ಖಪುರದಿಂದ ಪಾರಾದ ಮೇಲೆ ರಮಾನಂದನು, ತನ್ನ ವಿದ್ಯೆಯನ್ನು ರಾಜಾಸ್ಥಾನದಲ್ಲಿ ಪ್ರದರ್ಶಿಸಿ, ರಾಜನ ಆಶ್ರಯವನ್ನು ಸಂಪಾದಿಸಿ ಕೊಂಡನು. ಅವನು ರಾಜನೊಂದಿಗೆ ಮೂರ್ಖಪುರ ದಲ್ಲಿ ತನಗಾದ ಅನುಭವವನ್ನು ಹೇಳಿ, ಆ ಊರಿ ನವರಿಗೆ ಬಲವಂತವಾಗಿ ಓದುಬರೆಹ ಕಲಿಸಲು ತಕ್ಕ ಏರ್ಪಾಡು ಕೂಡಾ ಮಾಡಿಸಿದನು.






## ೧೭

[ಸಮುದ್ರಕೇತುವಿನ ಗುಂಪಿನೊಂದಿಗೆ ಶಿವದತ್ತ ಮೊದಲಾದವರು ಸ್ವಲ್ಪ ಹೊತ್ತು ಯುದ್ಧ ಮಾಡಿ, ಕಾಡಿನೊಳಗೆ ಓಡಿಹೋದರು. ಅಲ್ಲಿ ಅವರಿಗೆ ದೇವಮಾಯಿ ಎಂಬವಳು ಸಿಕ್ಕಿದಳು. ಅವಳಿಂದ ಶಿವದತ್ತಾದಿಗಳಿಗೆ ಮಕರ ಮಂಡಲದ ವೃತ್ತಾಂತವು ತಿಳಿಯಿತು. ಅವಳನ್ನು ಮುಂದಿಟ್ಟುಕೊಂಡು ಅವರೆಲ್ಲ ಹೊರಟರು. ನಿರ್ದಿಷ್ಟ ಪ್ರಾಂತ ಕಾಣಿಸಲು, ವಜ್ರಮುಷ್ಟಿ ಇಬ್ಬರು ಅನುಚರರೊಂದಿಗೆ ಮುಂದೆ ಹೋದನು.]

ಅಲ್ಲಿ ಸಮುದ್ರದ ನೀರು ಕಾಲುವೆಗಳ ಹಾಗೆ, ಸರೋವರಗಳಂತೆ, ನದಿಗಳ ರೂಪದಲ್ಲಿ, ಕೆಲವು ಕಡೆಹಳ್ಳಗಳಾಗಿಯೂ, ಕೊಳಗಳಾಗಿಯೂ ಕಾಣುತಿತ್ತು. ನಡುನಡುವೆ ಕುದುರು ನೆಲಗಳು.

ಒಂದು ಉಪ್ಪುನೀರು ನದಿಯ ಆಚೆಯ ಬದಿಯಲ್ಲಿ ಏನೋ ಶಬ್ದಗಳೇಳುವುದನ್ನು ವಜ್ರಮುಷ್ಟಿ ಕೇಳಿದನು. ಅದು ವಿಕೃತವಾದ ಕೇಕಾರವದಂತಿತ್ತು. ವಜ್ರಮುಷ್ಟಿ ತನ್ನ ಅನುಚರರಕಡೆಗೆ ತಿರುಗಿ,

"ಅದು ಸಮುದ್ರ ಕೇತನ ಗುಂಪಿನವರ ಶಬ್ದವೇ ಆಗಿರಬೇಕು. ಒಂದು ವೇಳೆ ಅವರು ಬೇರೆಯಾರೋ ಆಗಿದ್ದರೂ, ಕುಡಿದು ಮೈಮರೆತು ಹೊರಳಾಡಿಕೊಂಡು ಹುಚ್ಚುಚ್ಚಾಗಿ ಕೂಗುತಿದ್ದಾರೆಂಬುದಕ್ಕೆ ಸಂಶಯವಿಲ್ಲ. ನೀವು ಇಲ್ಲೇ ನಿಲ್ಲಿರಿ. ನಾನು ಹೋಗಿ ಎಲ್ಲವನ್ನೂ ಸ್ಪಷ್ಟಪಡಿಸಿಕೊಂಡು ಬರುತ್ತೇನೆ" ಎಂದು ಹೇಳಿ ನೆಲದ ಮೇಲೆ ಮಲಗಿ ತೆವಳಿಕೊಂಡೇ ಮುಂದೆ ಮುಂದೆ ಹೋದನು. ನೀರಿನ ಬದಿಯಲ್ಲಿದ್ದ ಒಂದು ತೆಪ್ಪವು ಅವನ ಕೈಗೆ ಸಿಕ್ಕಿತು.

ಆ ತೆಪ್ಪದಲ್ಲಿ ಕುಳಿತು ವಜ್ರಮುಷ್ಟಿ ಸ್ವಲ್ಪ ಹೊತ್ತಿಗೆಲ್ಲಾ ಆಚೆಯ ತೀರವನ್ನು ಸೇರಿದನು. ಅವನು ತೆಪ್ಪವನ್ನು ಬದಿಯಲ್ಲಿದ್ದ ಮರಕ್ಕೆ ಕಟ್ಟಿ,




ಕೆಲವರಿಗಾದರೂ ತಿಳಿದು ಬರುವುದರೊಳಗೆ, ವಜ್ರಮುಷ್ಟಿಯ ಹರಿತವಾದ ಕತ್ತಿ ಅವರ ತಲೆಗಳನ್ನು ಮುಂಡದಿಂದ ಬೇರ್ಪಡಿಸಿಬಿಟ್ಟಿತು.

ಇಷ್ಟರಲ್ಲಿ ಎಚ್ಚರಕ್ಕೆ ಬಂದ ನಾಲ್ಕೈದು ಮಂದಿ ಭೀಕರವಾಗಿ ಅರಚುತ್ತ ತಮ್ಮ ಆಯುಧಗಳನ್ನು ಎತ್ತಿಕೊಳ್ಳುವುದರೊಳಗೆ, ವಜ್ರಮುಷ್ಟಿಯ ಮಿಂಚಿನ ವೇಗದ ಕತ್ತಿ ಅವರನ್ನು ಕೂಡಾ ಕಡೆಗಾಣಿಸಿಬಿಟ್ಟಿತು

ಕಡೆಗೆ ಒಬ್ಬನೇ ಒಬ್ಬನು ಮಾತ್ರ ಉಳಿದು ಆ ಗಲಾಟೆಯ ಮಧ್ಯದಿಂದ ಪಾರಾಗಿ ಉಪ್ಪು ನೀರು ನದಿಯಕಡೆಗೆ ಓಡುವುದನ್ನು ವಜ್ರಮುಷ್ಟಿ ನೋಡಿ ಬಿಟ್ಟನು. ಅವನನ್ನು ಓಡಲು ಬಿಟ್ಟರೆ ಇಷ್ಟೂ ಜನರನ್ನು ಕೊಂದು ಪ್ರಯೋಜನವಿಲ್ಲವೆನಿಸಿತು. ವಜ್ರಮುಷ್ಟಿಗೆ. ಅವನೊಬ್ಬ ಬದುಕಿ ಹೋಗಿಬಿಟ್ಟರೆ ತಮಗೆಲ್ಲರಿಗೂ ಮುಪ್ಪು ಬರುವುದೆಂದು ವಜ್ರ ಮುಷ್ಟಿಗೆ ಗೊತ್ತು.

ವಜ್ರಮುಷ್ಟಿ "ಜೈ ಕಾಲಕೇಯಾ!" ಎಂದು ಓಡಿ ಹೋಗುವ ಕಳ್ಳನ ಹಿಂದೆ ಓಡಿದನು. ನಿರಾಯುಧನೂ, ಕುಡಿದ ಮತ್ತಿನಲ್ಲಿ ತಡಬಡಿಸುತ್ತಾ ಓಡುತ್ತಿದ್ದ ಆ ಸಮುದ್ರಕಳ್ಳ, ಒಮ್ಮೆ ಹಿಂದಿರುಗಿ, ನರ ಮೃಗದಂತೆ ಭೀಕರಾಕಾರದಲ್ಲಿ ಓಡಿಬರುವ ವಜ್ರ ಮುಷ್ಟಿಯನ್ನು ನೋಡಿ "ಸತ್ತೆನಲ್ಲಾ!" ಎಂದು ಕೆಟ್ಟದನಿಯಿಂದ ಕೂಗಿ, ಒಮ್ಮೆಗೇ ಇದಿರಿನಲ್ಲಿದ್ದ ನದಿಯೊಳಗೆ ಧುಮುಕಿಬಿಟ್ಟನು. ಅದು ಎಂತಹ ನದಿಗುಂಡಿ ಎಂದು ಅವನಿಗೆ ತಿಳಿದಿದ್ದರೂ, ಯೋಚಿಸಲು ಅವಧಿಯಿಲ್ಲದೆ ಧುಮುಕಿದನೆಂದು ಮರುಕ್ಷಣದಲ್ಲೇ ಗೊತ್ತಾಯಿತು.

ವಜ್ರಮುಷ್ಟಿ ಕೂಡ ಅವನ ಹಿಂದೆಯೇ ಆ ಉಪ್ಪುನೀರ್ನದಿಯೊಳಗೆ ಧುಮುಕಲಿರುವಾಗ, ತಾಳೇ ಮರದ ದಿಂಡಿನ ಹಾಗೆ ಅಷ್ಟರವರೆಗೆ ನೀರಿನಲ್ಲಿ ತೇಲುತ್ತಿದ್ದ ಮೊಸಳೆಯೊಂದು, ಆ ಸಮುದ್ರಚೋರನ ಮೇಲೆ ಹಾರಿತು. ಕಣ್ಣು ಮುಚ್ಚಿ ಬಿಡಿಸುವ

ಮತ್ತೆ ನೆಲಕ್ಕೆ ತಾಗಿ ತೆವಳುತ್ತಾ ಮುಂದೆ ಹೋದನು. ಸಮತಲವಾಗಿದ್ದ ಒಂದು ಸ್ಥಳದಲ್ಲಿ ಸುಮಾರು ಹತ್ತು, ಹನ್ನೆರಡು ಮಂದಿ ಚೋರ ಸಮುದ್ರ ಕೇತನ ಅನುಚರರು, ತಮ್ಮ ಆಯುಧಗಳನ್ನೆಲ್ಲ ಒಂದು ಕಡೆಯಲ್ಲಿ ರಾಶಿಯಾಗಿಟ್ಟು, ಮೈಮರೆಯುವ ಹಾಗೆ ಕುಡಿಯುತ್ತ, ಬಾಯಿಗೆ ಬಂದಹಾಗೆ ಕೂಗಾಡಿ ಕೊಂಡಿದ್ದರು. "ಆಹಾ! ಇಷ್ಟು ಒಳ್ಳೆಯ ಸಂದರ್ಭ ಅವರೆಲ್ಲ ಬರುವವರೆಗೂ ಇರಬೇಕು!" ಅನಿಸಿತು ವಜ್ರಮುಷ್ಟಿಗೆ,

ಅವರನ್ನೆಲ್ಲಾ ಹತಮಾಡಲಿಕ್ಕೆ ತಾನೊಬ್ಬನೇ ಸಾಕೆಂದು ವಜ್ರಮುಷ್ಟಿಗೆ ತೋರಿತು. ಅವನು ಒಮ್ಮೆಗೇ ಪೊದರಿನ ಮರೆಯಿಂದ ಆಚೆಗೆ ಎಗರಿ, "ಜೈ ಕಾಲಕೇಯಾ!" ಎಂದು ಗರ್ಜನೆತೆಗೆದು ಕತ್ತಿಬೀಸುತ್ತ ಯಾವುದೋ ಮೃಗದ ಹಾಗೆ ಕಳ್ಳರ ಮೇಲೆ ಹಾರಿದನು. ತಮ್ಮೆಲ್ಲರ ಮೇಲೆ ಎಂತಹ ಘೋರ ಆಪತ್ತು ಮುಗಿಬಿತ್ತೋ ಎಂದು ಕಳ್ಳರಲ್ಲಿ

ರೊಳಗೆ ಮೊಸಳೆ ಅವನನ್ನು ಬಾಯಿಯಲ್ಲಿ ಕಚ್ಚಿಕೊಂಡು, ನೀರಿನೊಳಗೆ ಎಳೆದುಕೊಂಡುಹೋಯಿತು.

ವಜ್ರಮುಷ್ಟಿ "ಅಹ್ಹಹ್ಹಾ!" ಎಂದು ಗಟ್ಟಿಯಾಗಿ ನಕ್ಕು. ಆ ಮೇಲೆ ಹಲ್ಲು ಕಡಿಯುತ್ತ, "ಸಮುದ್ರ ಕೇತನಿಗೆ ಕೂಡಾ ಇಂತಹ ಸಾವೇ ಬರಲಿದೆ ನನ್ನ ಕೈಯಲ್ಲಿ, ಅಲ್ಲದಿದ್ದರೆ ಮೊಸಳೆಯ ಬಾಯಿಯಲ್ಲಿ! ಜೈ ಕಾಲಕೇಯಾ!" ಎಂದು, ಅರಚಿದನು.

ಅಷ್ಟು ಹೊತ್ತಿಗೆ ವಜ್ರಮುಷ್ಟಿಯ ಹಿಂದೆ ಬಂದಿದ್ದ ಇಬ್ಬರು ಅನುಚರರೂ, ಆ ಉಪ್ಪುನೀರ್ನದಿಯ ತೀರಕ್ಕೆ ಬಂದು, ವಜ್ರಮುಷ್ಟಿಯ ಕಡೆಗೆ ಕೈಯಾಡಿಸಿದರು. ಇನ್ನು ತಡಮಾಡುವುದು ಒಳ್ಳೆಯದಲ್ಲವೆಂದುಕೊಂಡು ವಜ್ರಮುಷ್ಟಿ ತತ್‌ಕ್ಷಣವೇ ಒಂದು ತೆಪ್ಪದ ಮೇಲೆ ಹತ್ತಿ ಬೇಗಬೇಗನೆ ತೊಳಸಿಕೊಂಡು ಈಚೆಯ ತೀರಕ್ಕೆ ಬಂದನು.

ವಜ್ರಮುಷ್ಟಿ ಒಬ್ಬಂಟಿಗನಾಗಿ ಅಷ್ಟು ಮಂದಿ ಶತ್ರುಗಳನ್ನು ಸಂಹಾರ ಮಾಡಿದುದನ್ನು ನೋಡಿ, ಅನುಚರರಿಬ್ಬರೂ ಅವನ ಧೈರ್ಯಸಾಹಸ ಚಮತ್ಕಾರ ವೇಗಗಳನ್ನು ಸಾವಿರಬಾಯಿಯಲ್ಲಿ ಮೆಚ್ಚಿದರು. ತರುವಾಯ ಎಲ್ಲರೂ ಕೂಡಿ ಶಿವದತ್ತ ನಿರುವಲ್ಲಿಗೆ ಹೊರಟರು.

ವಜ್ರಮುಷ್ಟಿಯನ್ನು ಅಷ್ಟು ದೂರದಿಂದ ನೋಡುತ್ತಲೇ ಶಿವದತ್ತನು ಇದಿರಾಗಿ ಬಂದು, "ಹೋದ ಕಾರ್ಯವೇನಾಯಿತು? ಸಮುದ್ರಚೋರನ ಕಡೆಯವರು ಆ ಪ್ರಾಂತದಲ್ಲೆಲ್ಲಿಯೂ ಇಲ್ಲವಷ್ಟೆ?" ಎಂದು ಪ್ರಶ್ನಿಸಿದನು.

ವಜ್ರಮುಷ್ಟಿ ನಡೆದ ಸಮಾಚಾರವನ್ನು ಹಗುರಾಗಿ ತೇಲಿಸಿ ಹೇಳುವುದನ್ನು ನೋಡಿ, ಅವನು ತನ್ನ ಪರಾಕ್ರಮವನ್ನು ಹೇಳಲು ಭಿಡೆಗೊಳ್ಳುವನೆಂದು ತಿಳಿದು, ಸೈನಿಕರಿಬ್ಬರೂ ಅವನು ಮಾಡಿದ ಸಾಹಸಕಾರ್ಯವನ್ನು ಶಿವದತ್ತ ಮಂದರದೇವ




ರೊಂದಿಗೆ ಹೇಳಿದರು. ವಜ್ರಮುಷ್ಟಿಯ ಅಸಾಮಾನ್ಯವಾದ ಧೈರ್ಯ ಸಾಹಸಗಳಿಗೆ ಅವರು ಆಶ್ಚರ್ಯಪಟ್ಟರು.

"ವಜ್ರಮುಷ್ಟೀ. ನಿಜಕ್ಕೂ ನಿನ್ನ ಸಾಹಸವು ಕೊಂಡಾಡ ತಕ್ಕದ್ದು. ನೀನು ಈ ಮೊದಲು ಹೇಳಿದ ಕಾರ್ಯಕ್ಕೆ ಸಂದರ್ಭಬಂದರೆ ಸಮುದ್ರಕೇತನನ್ನು ನಾನು ಕೊಲ್ಲುವ ಹಾಗೆ ಬಂದರೂ ಆ ಕೆಲಸ ನಿನಗೇ ಬಿಡುತ್ತೇನೆ!" ಎಂದು ಉತ್ಸಾಹದಿಂದ ಹೇಳಿದನು ಶಿವದತ್ತ.

ಸಮುದ್ರ ಕೇತನ ಹೆಸರು ಕೇಳಿದ ಕೂಡಲೇ ದೇವಮಾಯಿ ಕೋಪೋದ್ರಿಕ್ತಳಾಗಿ, ತನ್ನ ಉದ್ರಿಕ್ತತೆಯನ್ನು ನುಂಗಿಕೊಂಡು, "ಅಯ್ಯಾ, ವಜ್ರಮುಷ್ಟಿಯ ಕತ್ತಿಯ ಪೆಟ್ಟಿಗೆ ಬಲಿಯಾದವರು ಆ ದುಷ್ಟನ ಕಡೆಯ ಕಳ್ಳ ಗುಂಪಿನವರೆಂದು ನನಗೆ ತೋರುವುದಿಲ್ಲ. ಅವರು ಈ ಪ್ರಾಂತದ ನಾಯಕನು ಕಾವಲಿಗೆ ಇಡಿಸಿದವರಾಗಿರಬಹುದು. ಆದ್ದರಿಂದ ಈಗ ನಾವು ಯಾರ




ಕಣ್ಣಿಗೂ ಬೀಳದಂತೆ, ಅವನ ನಿವಾಸ ಸ್ಥಳಕ್ಕೆ ತಲಪಿಬಿಡಬಹುದು. ಇಲ್ಲಿಗೆ ಸುಮಾರು ನಾಲ್ಕೈದು ಕ್ರೋಶ ದೂರದಲ್ಲಿ ಅವನ ಸ್ಥಾನವಿದೆ. ಅಲ್ಲಿಗೆ ನಾವು ಹೋಗಿ ಸೇರಬೇಕಾದರೆ ದೋಣಿಗಳ ಮೂಲಕವೇ ಹೋಗಬೇಕು ! ಮೊದಲು ದೋಣಿಗಳನ್ನು ಸಂಪಾದಿಸಬೇಕು " ಎಂದಳು.

"ಸಮುದ್ರಕೇತನು ಇರುವುದು ದೊಡ್ಡ ದುರ್ಗದೊಳಗೇನು ? ಆ ದುರ್ಗದ ರಚನೆ ಯಾವರೀತಿಯದೋ ? " ಎಂದು ಶಿವದತ್ತನು ಸಂಶಯ ವ್ಯಕ್ತಪಡಿಸಿದನು.

ಅದಕ್ಕೆ ದೇವಮಾಯಿ, "ದುರ್ಗದಂತಹ ಕೋಟೆ ಕಟ್ಟೋಣ, ಸೌಧಗಳಂತಹವಾವುದೂ ಇಲ್ಲ. ಆ ಪ್ರದೇಶವಷ್ಟೂ ಸಮುದ್ರಜಲದಿಂದ ಸುತ್ತಿಕೊಂಡಿದೆ, ಅಲ್ಲಲ್ಲಿ ಎತ್ತರವಾದ ಭೂಪ್ರದೇಶಗಳಿವೆ. ಅವನಿರುವ ಸ್ಥಳವು ಅಂತಹದರಲ್ಲಿ ಒಂದು. ಸುತ್ತಲೂ ಇರುವ ಉಪ್ಪು ನೀರಿನ ಆವರಣವೇ ಅವನ ರಕ್ಷೆ. ಯಾವ ಕಡೆಯಿಂದ ಶತ್ರುಗಳು ಬಂದರೂ ಅವನಿಗೆ ಗೊತ್ತಾಗಿಬಿಡುತ್ತದೆ. ಅಷ್ಟು ಭದ್ರದ ಸ್ಥಳವದು" ಎಂದಳು.

"ಅವನ ಕಡೆಯ ಕಳ್ಳಬಂಟರು ಬಹಳಮಂದಿ ಇರಬಹುದು ಅಲ್ಲವೆ ? " ಎಂದು ಶಿವದತ್ತನು ಕೇಳಿದನು.

"ಅನುಚರರಿಗೇನೂ ಕಡಿಮೆಯಿಲ್ಲ. ಅನೇಕರಿದ್ದಾರೆ. ಆದರೆ ಅವರನ್ನೆಲ್ಲ ಮೀರಿಸುವಷ್ಟು ಹೆಚ್ಚು ಮಂದಿ ಗುಲಾಮರು ಬಂಧನದಲ್ಲಿ ನರಳಿಕೊಂಡಿದ್ದಾರೆ. ನಮ್ಮ ಕಳ್ಳ ಶತ್ರುಗಳೂ ಇರುವುದು ಅಲ್ಲಿಯೇ, ನಾನು ಬಹಳಕಾಲ ಅಲ್ಲಿಯೇ ಬಂಧಿಸಲ್ಪಟ್ಟಿದ್ದವಳು. ಅದು ಹೋಗಲಿ. ಈಗ ಮೊದಲು ನಾವು ಆ ಗುಲಾಮರು ಬಂಧಿಸಲ್ಪಟ್ಟಿರುವ ಕೊಟ್ಟಿಗೆಗಳ ಬಳಿಗೆ ಹೋಗಿ, ಅವರನ್ನೆಲ್ಲ ಬಂಧಮುಕ್ತಗೊಳಿಸಲು ಸಾಧ್ಯವಾದರೆ, ಆ ಮೇಲೆ ನಮ್ಮ ಅಗತ್ಯವೇ ನಿಲ್ಲದೆ, ಆ ರೋಷ ಕಷಾಯಿತರಾದ ಗುಲಾಮರೇ ಸಮುದ್ರಕೇತನನ್ನೂ, ಅವನ ಅನುಚರರನ್ನೂ ಕೊನೆಗೊಳಿಸಿಬಿಡಬಿಲ್ಲರು. ಅಷ್ಟು ಹಿಂಸೆ ಪಡಿಸಿದವನು ಕಾಲಕೇತ " ಎಂದಳು ದೇವಮಾಯಿ ಉದ್ರೇಕಿತಳಾಗಿ.

"ಆ ಗುಲಾಮರ ಸಂಖ್ಯೆ ಸುಮಾರು ಎಷ್ಟಿದ್ದೀತು ? " ಎಂದು ಶಿವದತ್ತನು ಕೇಳಿದನು.

"ಐದಾರು ನೂರು ಜನರಿಗಿಂತ ಕಡಿಮೆಯಂತೂ ಅಲ್ಲ." ಎಂದಳು ದೇವಮಾಯಿ.

"ಹಾಗಾದರೆ ನಾವೀಗ ಅಲ್ಲಿಗೆ ಹೊರಡುವ, ವಜ್ರಮುಷ್ಟಿ ಸಂಪಾದಿಸಿದ ಚಿಕ್ಕ ದೋಣಿಗಳ, ಸಹಾಯದಿಂದ, ಆಳವಷ್ಟೇನಿಲ್ಲದ ಈ ಉಪ್ಪು ನೀರ್ನದಿಗಳನ್ನು ದಾಟಿಕೊಂಡು, ನಾವೆಲ್ಲಾ ಆ ಸಮುದ್ರಕೇತನ ಲಯಕಾರ್ಯಕ್ಕೆ ಹೋಗಿ ಸೇರಿಬಿಡಬಹುದು. ಕತ್ತಲೆಯಾಗುತ್ತಾ ಇದೆ. ಶತ್ರುಗಳು ಮೋಸ ಹೋಗುವ ರೀತಿಯಲ್ಲಿ ಇದಿರಿಸಿ ಹತಾಹತ ಮಾಡಲು ಇದೇ ತಕ್ಕ ಸಮಯ!" ಎಂದು ಶಿವದತ್ತನು ಎಲ್ಲರಿಗೂ ಹೊರಡಲು ಸಂಜ್ಞೆ ಮಾಡಿದನು.



ಎಲ್ಲರೂ ಉಪ್ಪುನೀರ್ನದಿಯ ಬಳಿಗೆ ಹೊರಟರು. ಸ್ವಲ್ಪ ಹೊತ್ತಿಗೆ ಅವರು ಸೇರಿದ ಸ್ಥಳವು ಸುತ್ತಲೂ ಜಲಮಯವಾಗಿ. ಅಲ್ಲಲ್ಲಿ ಮಿಟ್ಟೆ ಪ್ರದೇಶದಲ್ಲಿ ಹಸಿರು ಮುರಿಯುವ ಮರಗಳಿಂದ ಕೂಡಿದ್ದಿತು. ಸಮುದ್ರಚೋರರು ಬಿಟ್ಟಿದ್ದ ಕೆಲವು ದೋಣಿಗಳು ಮರಗಳಿಗೆ ಕಟ್ಟಿ ನಿಲ್ಲಿಸಲಾಗಿದ್ದುವು. ಅವರೆಲ್ಲ ಆ ದೋಣಿಗಳಲ್ಲಿ ಕುಳಿತು ದೇವಮಾಯಿ ತೋರಿಸುವ ದಿಕ್ಕಿಗೆ ದೋಣಿಗಳನ್ನು ಸಾಗಿಸಿಕೊಂಡು ಹೊರಟರು.

ಅಷ್ಟು ಹೊತ್ತಿಗೆ ಚೆನ್ನಾಗಿ ಕತ್ತಲೆ ಮುಸುಕಿತು. ಚಂದ್ರನು ಎಲ್ಲಿಯೋ ಮೇಘಗಳ ಮರೆಯಲ್ಲಿ, ಮಸಮಸಕಾಗಿ ಹೋಗಿದ್ದನು. ಅಲ್ಲಿಗೆ ಬಹಳ ದೂರದಲ್ಲಿ ಸಮುದ್ರಕೇತನ ನಿವಾಸಸ್ಥಾನವಿರುವ ಚಿಕ್ಕ ದ್ವೀಪ ಖಂಡವು ಮಿನುಕು ಮಿನುಕಾಗಿ ಬೆಳಗುವ ದೀವಿಟಿಗೆಗಳ ಕಾಂತಿ ಹೊರತು, ಸುತ್ತಲೂ ಭೀತಿ ಹುಟ್ಟಿಸುವ ಗಾಢಾಂಧಕಾರವೇ.

ಆ ಕಗ್ಗಾನುಗತ್ತಲೆಯಲ್ಲಿ ಒಬ್ಬರಿಗೊಬ್ಬರು ಎಚ್ಚರಿಕೆ ಹೇಳಿಕೊಳ್ಳುತ್ತ, ದೋಣಿಗಳು ಒಂದಕ್ಕೊಂದು ತಾಗಿ ಅಡಿ ಮೇಲಾಗದಂತೆ ನೋಡಿಕೊಳ್ಳುತ್ತ, ಶಿವದತ್ತಾದಿಗಳು ಮುಂದೆ ಮುಂದೆ ಸಾಗುತ್ತಿದ್ದರು. ದಾರಿಯಲ್ಲಿ ಅಲ್ಲಲ್ಲಿರುವ, ಮಿಟ್ಟೆ ಪ್ರದೇಶಗಳಲ್ಲಿದ್ದ ಮರಗಳ ಕಡೆಯಿಂದ ನೀರು ಹಕ್ಕಿಗಳ ವಿಕೃತ ಧ್ವನಿಗಳು ಕೇಳುತ್ತಿದ್ದುವು. ರೆಕ್ಕೆಗಳ ಫಡಫಡಗಳೂ ಹೊರಡುತ್ತಿದ್ದುವು. ನೀರಿನಲ್ಲಿ ಆಹಾರ ಸಂಪಾದನೆಗೆ ತಿರುಗಾಡಿಕೊಂಡಿದ್ದ ಮೊಸಳೆಗಳು, ಇತರ ಕ್ರೂರ ಜಲಚರಗಳು ದೋಣಿಗಳ ವರೆಗೂ ಬಂದು, ಅವುಗಳಲ್ಲಿ ಮನುಷ್ಯರ ಶಬ್ದ ಕೇಳಿದ ಕೂಡಲೇ ಹೆದರಿ ದೂರದೂರ ಓಡಿ ಹೋಗಿ ಬಿಡುತ್ತಿದ್ದುವು.

ಸುಮಾರು ಮಧ್ಯ ರಾತ್ರಿಯ ಹೊತ್ತಿಗೆ ಶಿವದತ್ತನು ತನ್ನ ಅನುಚರರೊಂದಿಗೆ ಸಮುದ್ರಕೇತನು ವಾಸಮಾಡುವ ಮಿಟ್ಟೆ ಪ್ರಾಂತದ ಹತ್ತಿರ ಸೇರಿದನು. ಈಗ ಮಾಡಬೇಕಾದ ಮೊದಲನೇ ಕೆಲಸ, ಪಶುಗಳ ಹಾಗೆ ಕೊಟ್ಟಿಗೆಯಲ್ಲಿ ಗೂಟಕ್ಕೆ ಕಟ್ಟಲ್ಪಟ್ಟ ಗುಲಾಮರನ್ನು ಮುಕ್ತಗೊಳಿಸುವುದು, ಇದು ಸಪ್ಪಳಿಲ್ಲದೆ ನಡೆಯಬೇಕಾದ ಕೆಲಸ. ಆ ಮೇಲೆ ಅವರ ಸಹಾಯದಿಂದ ಸಮುದ್ರಕೇತನನ್ನು ಸಪರಿವಾರವಾಗಿ ಹತ ಮಾಡಬೇಕು.

ಶಿವದತ್ತನು ಹೀಗೆ ಭಾವಿಸಿಕೊಂಡಿರುವಾಗಲ್ಲೆ ತಲಪಬೇಕಾದ ತೀರ ಪ್ರದೇಶವು ತಾಗಿತು. ಇನ್ನು ದೋಣಿಗಳು ಮುಂದುವರಿಯಲಾರವು. ಎಲ್ಲರೂ ದೋಣಿಗಳಿಂದ ಇಳಿದು ಸಪ್ಪಳಾಗದಂತೆ ಕಾಲೆಳೆದುಕೊಂಡು ತೀರವನ್ನು ಸೇರಿದರು. ತರುವಾಯ, ಮರಗಳ ಮರೆಯಿಂದಾಗಿ ತಗ್ಗಿಬಗ್ಗೀ ತೆವಳೀ ಸ್ವಲ್ಪದೂರ ಹೋಗುವಷ್ಟರಲ್ಲಿ, ಆ ಪ್ರಾಂತವನ್ನೆಲ್ಲಾ ಹಚ್ಚಹಗಲಿನಂತೆ ಬೆಳಗಿಸುವ ಅನೇಕ ನೂರು ದೀವಟಿಗೆಗಳ ಕಾಂತಿ ಅವರ ಮುಂದೆ ಪ್ರತ್ಯಕ್ಷವಾಯಿತು. ಈ ಕಾಂತಿಯು ಗುರಿ ಒಡಿದು



ಕೊಂಡೇ ಅವರೆಲ್ಲ ಅಲ್ಲಿಗೆ ಬಂದುದಾಗಿತ್ತು. ಶಿವದತ್ತನು ಕೂಡಲೇ ಆ ಬೆಳಕು ಪಸರಿಸ ದಿರುವ ಮರಗಳ ಗುಂಪಿನೊಳಗೆ ಸೇರಿ, ತನ್ನ ಅನುಚರರನ್ನೂ ಸಂಜ್ಞೆಯಿಂದ ತನ್ನ ಬಳಿಗೆ ಕರೆದು ಕೊಂಡನು.

ಎಲ್ಲರೂ ಮರಗಳ ಮರೆಯಲ್ಲಿ ಅಡಗಿಕೊಂಡು ದೀವಟಿಗೆಗಳ ಪ್ರಕಾಶವಿರುವ ಸ್ಥಳವನ್ನು ನೋಡಿ ದರು. ಅಲ್ಲಿ ಸುಮಾರು ನಲುವತ್ತು ಐವತ್ತುಮಂದಿ ಕಟ್ಟಾಳುಗಳಾದ ಸಮುದ್ರಚೋರರು ಸೇರಿದ್ದರು. ಕೆಲವರು ನಿಂತಿದ್ದರೆ ಮತ್ತೆ ಕೆಲವರು ಕುಳಿತಿದ್ದರು. ಕೆಲವರು ಕಾಲಾಡಿಸಿಕೊಂಡು ಏನೋ ಗುಸುಗುಟ್ಟಿ ಕೊಂಡಿದ್ದರು. ಸಮುದ್ರ ಕೇತನು ಕೈಯಲ್ಲಿ ಪಾನ ಪಾತ್ರವನ್ನು ಹಿಡಿದುಕೊಂಡು ಮಧ್ಯೆ ಮಧ್ಯೆ ಮದ್ಯ ವನ್ನು ಸೇವಿಸುತ್ತ, ಕವಚಧಾರಿಗಳಾದ ನಾಲ್ಕೈದು ಮಂದಿ ವ್ಯಕ್ತಿಗಳೊಂದಿಗೆ ರಹಸ್ಯವಾಗಿ ಏನೋ ಮಾತಾಡಿಕೊಂಡಿದ್ದನು.

ದೇವಮಾಯಿ ತನ್ನ ತೋರು ಬೆರಳನ್ನು ಅವರ ಕಡೆಗೆ ನೀಡಿ, "ಆ ಕವಚಧಾರಿಗಳು ನಾಲ್ವರೂ ಮಕರ ಮಂಡಲದ ರಾಜನಾದ ಹರಿಶಿಖನ ಸೈನಿ ಕರು. ಬೆಳಗಾದರೆ ಮಕರದೇವತೆಗೆ ಬೇಕಾದ ಆಹಾ ರದ ಬಲಿಯನ್ನು ಸಂಪಾದಿಸಲು ಇಲ್ಲಿಗೆ ಬಂದಿದ್ದಾರೆ. ಸಮುದ್ರ ಕೇತನು ಬಂಧಿಸಿ ತಂದವರಲ್ಲಿ ಆರೋಗ್ಯ ವಂತರಾಗಿದ್ದ, ಗಟ್ಟಿಮುಟ್ಟ ಯುವಕರಿಗೆ ಎಷ್ಟು ಬೆಲೆಯಾದರೂ ಕೊಟ್ಟುಕೊಂಡುಕೊಂಡು ತಮ್ಮ ಮಕರ ಮಂಡಲಕ್ಕೆ ಒಯ್ದು ಬಿಡುತ್ತಾರೆ. ಈಗ ನಡೆಯುವುದು ಅಂತಹ ವ್ಯಾಪಾರವೇ!" ಎಂದಳು.

ಅವಳು ಹೇಳಿದುದನ್ನು ಕೇಳಿ ಶಿವದತ್ತನು ಆಶ್ಚರ್ಯ ಪಡುತ್ತ, "ಮಕರ ದೇವತೆಗೆ ಆಹಾರ ಹಾಕುವುದಕ್ಕೆ ಮಾನವರ ಹೊರತು ಪ್ರಾಣಿಗಳಾ ವುದೂ ಉಪಯೋಗಕ್ಕೆ ಬಾರವೇ? ಇಷ್ಟೊಂದು ಬೆಲೆತೆತ್ತು ಮನುಷ್ಯರೇ ಆಗಬೇಕೆಂದೇನಿದೆ? ಇದು ಬಹಳ ವಿಚಿತ್ರವೇ!" ಎಂದು ಕೇಳಿದನು.

"ಮಕರ ಮಂಡಲದ ಪ್ರಜೆಗಳೆಲ್ಲರೂ ಅದನ್ನು ದೇವತೆಯ ಅವತಾರವೆಂದೇ ನೋಡುತ್ತಾರೆ. ಯಾವುದೋ ಕ್ಷುದ್ರ ದೇವತೆಗಳು ಇದ್ದಾವಷ್ಟೆ? ಹಾಗೆಯೇ ಇದೂ ಒಂದು ಎಂದು ತಿಳಿದುಕೊಳ್ಳಿ. ಈ ಮಕರದೇವತೆ ಎಂದರೆ ಪ್ರಜೆಗಳಿಗೆಲ್ಲಾ ಮಹಾ ಭಯ. ಅದಕ್ಕೆ ಪ್ರಾಣಿಗಳನ್ನು ಬಲಿ ಕೊಡುವು ದೆಂದರೆ ಅದೊಂದು ಅಪಚಾರವೆಂದೇ ಭಾವಿಸು ತ್ತಾರೆ ಅಲ್ಲಿಯ ಪ್ರಜೆಗಳು, ಹಾಗೆ ಮಾತಾಡುವುದೇ ದೊಡ್ಡ ತಪ್ಪು! ರಾಜನೇನು ಮಾಡುವನು? ಪ್ರಜೆಗಳ ಇಷ್ಟದಂತೆ ನಡೆಸದಿದ್ದರೆ ದಂಗೆ ಏಳುತ್ತಾರೆ" ಎಂದಳು ದೇವಮಾಯಿ.

"ಒಂದುವೇಳೆ ಆ ಮೂಢರು ಭಾವಿಸುವುದೇ ನಿಜವಾದರೆ ಆ ಕ್ಷುದ್ರದೇವತೆಯ ಪಾಲಿನ ಯಮ ನೊಬ್ಬ ನಮ್ಮಲ್ಲೇ ಇದ್ದಾನೆ" ಎಂದು ಶಿವದತ್ತನು ವಜ್ರಮುಷ್ಟಿಯನ್ನು ತೋರಿಸಿ ನಕ್ಕನು.



“ನಾನು ಆ ಮಕರ ದೇವತೆಗೆ ಮಾತ್ರವಲ್ಲ, ಈ ಕ್ರೂರ ಸಮುದ್ರ ಕೇತನ ಪಾಲಿಗೆ ಕೂಡಾ ಕಾಲಯಮ !” ಎಂದು ವಜ್ರಮುಷ್ಟಿ ಕೋಪದಿಂದ ಮುಷ್ಟಿಬಿಗಿದು ಹಲ್ಲುಕಡಿದನು.

“ಸರಿ. ಇನ್ನು ನಾವು ಒಂದಿಷ್ಟೂ ಶಬ್ದಮಾಡದೆ ಹೋಗಿ ಗುಲಾಮರ ಬಂಧಮುಕ್ತ ಮಾಡೋಣ. ಒಂದು ವೇಳೆ ನಾವು ಆ ಕಾರ್ಯದಲ್ಲಿ ವಿಫಲರಾಗಿ ಹೋದರೆ, ನಾವು ಬಂದ ದೋಣಿಗಳು ಇಲ್ಲಿಯೇ ಇವೆ. ಅವುಗಳ ಸಹಾಯದಿಂದ ತಪ್ಪಿಸಿಕೊಂಡು ಓಡಿಬಿಡುವ ಎಚ್ಚರಿಕೆಯೂ ನಮಗಿದ್ದರಾಯಿತು !” ಎಂದನು ಶಿವದತ್ತ.

ದೇವಮಾಯಿ ದೊಡ್ಡದಾಗಿ ಕಾಣುವ ಬಂಧನದ ಕೊಟ್ಟಿಗೆ ಸಾಲೆಯಕಡೆಗೆ ದಾರಿತೋರಿಸುತ್ತಾ ನಡೆದಳು. ಎಲ್ಲರೂ ಮಠಗಳ ಮರೆಯಲ್ಲಿ ಅಡಗಿಕೊಂಡೇ ಆ ಕಡೆಗೆ ನಡೆದರು. ಸ್ವಲ್ಪಹೊತ್ತಿಗೆ ಅವರು ಪಶುಗಳ ಶಾಲೆಯಂತಿರುವ ವಿಸ್ತಾರವಾದ ಆ ಕೊಟ್ಟಿಗೆಗಳ ಜಾಗಕ್ಕೆ ಮುಟ್ಟಿದರು. ಅದರೊಳಗೆ ಪಶುಗಳ ಹಾಗೆ ದೊಡ್ಡದೊಡ್ಡ ಗೂಟಗಳಿಗೆ, ಸಾಲಾಗಿ ಸಂಕಲೆಗಳಿಂದ ಕೈಕಾಲುಗಳನ್ನು ಬಂಧಿಸಿದ ಮನುಷ್ಯರಿರುವುದನ್ನು ನೋಡಿದರು.

ಶಿವದತ್ತನು ತನ್ನ ಅನುಚರರಿಗೆ ಎಚ್ಚರಿಕೆಯ ಸಂಜ್ಞೆ ಮಾಡಿ, ಮೆಲ್ಲನೆ ಆ ಕೊಟ್ಟಿಗೆಯೊಳಗೆ ಪ್ರವೇಶಿಸಿದನು. ತೀರಾ ಸೋತವರಂತಿರುವ ಬಂಧಿತರ ಬಳಿಗೆ ಮೊದಲು ವಜ್ರಮುಷ್ಟಿ ಹೋಗಿ, ಪ್ರತಿಯೊಬ್ಬನ ಕಿವಿಯಲ್ಲಿಯೂ ತಾವು ಬಂದ ಕಾರ್ಯವನ್ನು ಹೇಳಿ ಎಲ್ಲರೂ ನಿಶಬ್ದವಾಗಿರಬೇಕೆಂದು ಎಚ್ಚರಿಕೆ ಕೊಟ್ಟನು.

ಶಿವದತ್ತನೂ ಅವನ ಅನುಚರರೂ ತಮ್ಮ ಹತ್ತಿರವಿದ್ದ ಆಯುಧಗಳಿಂದ ಮೊದಲು ಕೆಲವು ಮಂದಿ ಗುಲಾಮರನ್ನು ಬಂಧಮುಕ್ತರನ್ನಾಗಿ ಮಾಡಿದರು. ಹಾಗೆ ಬಂಧಮುಕ್ತರಾದ ಗುಲಾಮರು ಬೇಗದಲ್ಲೇ ತಮ್ಮ ಹಾಗಿದ್ದವರೆಲ್ಲರನ್ನೂ ಬಂಧನದಿಂದ ಬಿಡುಗಡೆಗೊಳಿಸಿದರು. ಅವರ ಸಂತೋಷಕ್ಕೆ ಪಾರವಿಲ್ಲ.

ಈವಿಧವಾಗಿ ಸ್ವಲ್ಪ ಹೊತ್ತಿನೊಳಗೆ ಆ ಪ್ರಾಂತದಲ್ಲಿದ್ದ ಕೊಟ್ಟಿಗೆಗಳಲ್ಲಿ ಕಟ್ಟಲ್ಪಟ್ಟವರೆಲ್ಲರೂ ಬಿಡುಗಡೆಯಾದರು.

ಆದರೆ ಸ್ವಯಂಪ್ರಭೆ ಎಲ್ಲಿ ? ಈ ಪ್ರಶ್ನೆ ದೇವಮಾಯಿಯನ್ನೂ, ಮಂದರದೇವನನ್ನೂ ಮೊದಲಿನಿಂದಲೂ ಕಾಡಿಕೊಂಡೇ ಇದ್ದಿತು. ಅವರು ಅನೇಕ ಗುಲಾಮರೊಂದಿಗೆ ಕೇಳಿ ನೋಡಿದರು, ಅವರಾರಿಗೂ ಅವಳನ್ನು ಕುರಿತು ತಿಳಿಯದು. ಸ್ವಯಂಪ್ರಭೆಯನ್ನು ಇಷ್ಟರೊಳಗೆ ಮಕರದೇವತೆಯ ಹೊಟ್ಟೆಗೆ ದೂಡಿಬಿಟ್ಟರೇನೋ ಎಂದು ಅವರು ಹೆದರಿದರು. ಅಷ್ಟರಲ್ಲಿ ಒಬ್ಬ ಗುಲಾಮನು ಮುಂದೆ ಬಂದು, “ಅಯ್ಯಾ, ಸ್ವಲ್ಪ ಮೊದಲು ಕಾವಲುಗಾರರು, ಒಬ್ಬಳು ಮಹಾ ಸುಂದರಿ ಹುಡುಗಿ

ಸಿಕ್ಕಿದ್ದಾಳೆಂದೂ, ಅವಳನ್ನು ಸಮುದ್ರಕೇತನು ಭಾರೀ ಬೆಲೆಗೆ ಯಾರಿಗೋ ಮಾರಲಿದ್ದಾನೆಂದೂ ಮಾತಾಡಿಕೊಳ್ಳುವುದನ್ನು ಕೇಳಿದೆ " ಎಂದನು.

ಈ ವಾರ್ತೆ ಕೇಳಿ ದೇವಮಾಯಿಗೂ ಇತರರಿಗೂ ಸ್ವಲ್ಪ ಸಮಾಧಾನವೆನಿಸಿತು. ಮಂದರದೇವನು ಶಿವದತ್ತನ ಬಳಿಗೆ ಬಂದು, "ಶಿವದತ್ತಾ, ಇಲ್ಲಿ ಇಷ್ಟು ಮಂದಿ ಗುಲಾಮರಿರುವರಷ್ಟೆ? ಇವರಿಗೆ ಕಾವಲು ಗೀವಲು ಅಂತ ಏನೂ ಇಲ್ಲದಿರುವುದು ಒಂದು ಆಶ್ಚರ್ಯವಲ್ಲವೆ?" ಎಂದನು.

ಶಿವದತ್ತನು ಆ ಪ್ರಶ್ನೆಗೆ ನಕ್ಕು, "ಈ ಸಮುದ್ರ ಜಲದ ನಡುವಿನಲ್ಲಿರುವ ಮಿಟ್ಟೆ ಪ್ರದೇಶದಲ್ಲಿ ಕಬ್ಬಿಣದ ಸಂಕಲೆಗಳಿಂದ ಕೈಕಾಲು ಕಟ್ಟಲ್ಪಟ್ಟವರು ಎಲ್ಲಿಗೆ ತಾನೇ ಹೋಗಲು ಸಾಧ್ಯ? ಕಾವಲು ಏಕೆ ದಂಡಕ್ಕೆ? ಅದಿರಲಿ, ಪ್ರಸ್ತುತ ಕಾರ್ಯವನ್ನು ಆಲೋಚಿಸೋಣ. ಸ್ವಯಂಪ್ರಭೆ ಈ ಪ್ರಾಂತದಲ್ಲೆಲ್ಲಿಯೋ ಇರಬಹುದೆಂದುಕೊಳ್ಳೋಣ. ನಾವು ಎಲ್ಲರೂ ಒಂದೇ ಬಾರಿಗೆ ಸಮುದ್ರಕೇತನ ಮೇಲೆ ಬಿದ್ದು. ಅವನನ್ನು ಅವನ ಪರಿವಾರದೊಂದಿಗೇ ಸರ್ವನಾಶ ಮಾಡಿಬಿಡೋಣ. ಯಾರನ್ನೂ ತಪ್ಪಲು ಬಿಡಬಾರದು" ಎಂದನು.

ಇಷ್ಟರಲ್ಲಿ ವಜ್ರಮುಷ್ಟಿ ಎಲ್ಲಾ ಗುಲಾಮರನ್ನೂ ಒಂದು ಕಡೆಯಲ್ಲಿ ಸೇರಿಸಿ, ಅವರಿಗೆ ಕೋಲು, ಕಟ್ಟಿಗೆ, ದೊಣ್ಣೆ, ಸಂಕಲೆ, ಗಢಾರೆ, ಹಾರೆ, ಈ ವಿಧವಾಗಿ ಕೈಗೆ ಏನು ಸಿಕ್ಕಿತೋ ಅದನ್ನು ಕೊಡಿಸಿ ಸರ್ವಸನ್ನದ್ಧರಾಗುವಂತೆ ಮಾಡಿದನು. ಶಿವದತ್ತನ ಆಜ್ಞೆಯಾದ ಕೂಡಲೇ ತಯಾರಾದ ಹೊಸ ಸೇನೆಯನ್ನು ಮೂರು ವಿಭಾಗ ಮಾಡಿದರು. ಶಿವದತ್ತನೂ, ಮಂದರದೇವನೂ, ವಜ್ರಮುಷ್ಟಿಯೂ ಆ ಮೂರು ವಿಭಾಗಗಳಿಗೂ ಮುಂದಿದ್ದು ದಾಳಿ ಪ್ರಾರಂಭಿಸಬೇಕೆಂದು ನಿರ್ಣಯಿಸಲ್ಪಟ್ಟಿತು.

ಎಲ್ಲರೂ ಮರಗಳ ಮರೆಯಲ್ಲಿಯೇ, ಕತ್ತಲೆಯೊಳಗಿಂದಾಗಿಯೇ, ಶಬ್ದವಿಲ್ಲದೆ ನಡೆದು, ಒಂದೇ ಸಾರಿ ಮೂರು ದಿಕ್ಕುಗಳಿಂದ, ಭೀಕರವಾಗಿ ಬೊಬ್ಬಿರಿಯುತ್ತ, ಸಮುದ್ರಕೇತನ ಮೇಲೆ ಧುಮುಕಿದರು.

ಇಷ್ಟೊಂದು ಆಕಸ್ಮಿಕವಾಗಿ ತಮ್ಮ ಮೇಲೆ ಹಾರಿ ಬೀಳುವ ಶತ್ರುಗಳು ಯಾರು ಏನೆಂಬುದನ್ನು ತಿಳಿದುಕೊಂಡು, ಪ್ರತಿಭಟಿಸಲು ಸಾಧ್ಯವಾಗುವುದಕ್ಕೂ ಸಮಯವಿರಲಿಲ್ಲ. ಅವರೆಲ್ಲ ಕೈಯಾಡಿಸುವುದರೊಳಗೆ ಕಳ್ಳರ ಗುಂಪಿನ ಅನೇಕಮಂದಿ ಶಿವದತ್ತನ ಗುಂಪಿನವರ ಕತ್ತಿ, ಕಟ್ಟಿಗೆ ಮೊದಲಾದ ಆಯುಧಗಳಿಗೆ ಬಲಿಯಾಗಿ ಬಿದ್ದರು.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)





# ಅಡಗಿಸಿದುದು

**ಬೇ**ತಾಳದ ಪ್ರವೇಶದಿಂದ ಬಲಗೊಂಡು ಪದೇ ಪದೇ ಹಾರಿಹೋಗಿ ಮರದಕೊಂಬೆಯಲ್ಲಿ ನೇತಾಡುವ ಶವವನ್ನು, ಮಧ್ಯರಾತ್ರಿಯಲ್ಲಿ ಮತ್ತೆ ಬಂದ ರಾಜಾ ತ್ರಿವಿಕ್ರಮನು, ಕೊಂಬೆಯಿಂದ ಕೆಳಗಿಳಿಸಿ ತನ್ನ ಭುಜಸ್ಕಂಧದಲ್ಲಿ ಹೊತ್ತುಕೊಂಡು, ಎಂದಿನಂತೆ ಗಂಭೀರ ಮೌನದಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದ ಮೂಲಕ ಮಾತಾಡಲು ತೊಡಗಿದ ಬೇತಾಳವು, "ಎಲೈ ಮಹಾರಾಜಾ, ನಿನ್ನ ಈ ಬೆಂಬಿಡದ ಕೆಲಸಕ್ಕೆ ನಿನ್ನ ಜಾತಕ ಪ್ರಭಾವ ಕಾರಣವೋ, ಅಲ್ಲ ವಿಧಿಯ ವೈಪರೀತ್ಯವೇ ಕಾರಣವೋ ಎಂಬ ಅನುಮಾನವಾಗಿದೆ. ಕೆಲಮಂದಿ ಬಲಿಷ್ಠರ ಕೈಯೊಳಗೆ ಸಿಕ್ಕಿ ಏನೂ ಮಾಡಲಾಗದ ಗುಲಾಮತನ ಅನುಭವಿಸುವವರಿದ್ದಾರೆ. ಮತ್ತೆ ಕೆಲವರು ಅಂತಹ ದುರದೃಷ್ಟವೇ ನಿಲ್ಲದೆ ಹೋದರೂ, ಹುಟ್ಟಾ ಗುಲಾಮರಂತಿರುತ್ತಾರೆ. ನೀನು ಯಾವ ಗುಂಪಿಗೆ ಸೇರಿದವನೋ ನನಗೆ ತಿಳಿಯದು. ಈ ಎರಡನೆಯ ಬಗೆಗೆ ಸೇರಿದ ಹನುಮಯ್ಯನೆಂಬೊಬ್ಬ ವಿಚಿತ್ರ ವ್ಯಕ್ತಿಯ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ಇರುವಾಗ ನಿನಗೆ ನಡೆಯುವ

ಬೇತಾಳ ಕಥೆಗಳು?...



ಕಷ್ಟ ಇರಲಾರದಷ್ಟೆ?" ಎಂದು ಪೀಠಿಕೆ ಹಾಕಿ ಕಥೆಯನ್ನು ಹೇಳತೊಡಗಿತು:

ಒಂದು ಕಾಲದಲ್ಲಿ ಕಾಂಚೀಪುರದಲ್ಲಿದ್ದ ಧನಗುಪ್ತನೆಂಬ ವರ್ತಕನು ಇತರ ವರ್ತಕರನ್ನೆಲ್ಲ ಮೀರಿಸುವಷ್ಟು ಐಶ್ವರ್ಯವಂತನಾಗಿದ್ದನು. ತಂದೆ ತಾತ ಮುತ್ತಾತಂದಿರು ಸಂಪಾದಿಸಿಟ್ಟು ಹೋದ ಸಂಪತ್ತೇ ಬೇಕಾದಷ್ಟಿದ್ದಿತು. ಅದರ ಮೇಲೆ ಧನಗುಪ್ತನು ಹೊರಗಿನ ದೇಶಗಳಿಗೂ ತನ್ನ ವ್ಯಾಪಾರವನ್ನು ವಿಸ್ತರಿಸಿ ಲಕ್ಷಕ್ಕೆ ಲಕ್ಷ ಗಳಿಸಿ, ತಂದೆ ಕಟ್ಟಿದ ಗುಡಿಗೆ ಕಳಸವಿಟ್ಟುಕೊಂಡಿದ್ದನು.

ಇಷ್ಟೆಲ್ಲಾ ಸಂಪತ್ತುಗಳಿದ್ದರೂ ಧನಗುಪ್ತನಿಗೆ ರವಷ್ಟೂ ಮನಃಶಾಂತಿ ಇರಲಿಲ್ಲ. ಅವನಿಗೆ ವಯಸ್ಸು ಮೀರಿ ವೃದ್ಧಾಪ್ಯವು ಹಣಿಕಿಹಾಕುವ ವಯಸ್ಸಾದರೂ ಸಂತಾನವಾಗಿರಲಿಲ್ಲ. ಔಷಧವಿಲ್ಲದ ಮನೋವ್ಯಾಧಿಯಾಗಿರುವ ಈ ಚಿಂತೆ, ಅವನ ಹೆಂಡತಿಯನ್ನು, ಅವನಿಗಿಂತ ಹೆಚ್ಚಾಗಿಯೇ ಹಿಡಿದಿತ್ತು. ಮನೆಯೊಳಗೇ ಇದ್ದುಕೊಂಡು ದಿನಾ ಚಿಂತಿಸಿ ಚಿಂತಿಸಿ ಕೃಶವಾಗುತ್ತಿದ್ದಳು ಅವನ ಹೆಂಡತಿಯಾದ ಕನಕಲಕ್ಷ್ಮಿ.

ಹೀಗಿದ್ದರೂ ಧನಗುಪ್ತನು ವ್ಯಾಪಾರಕಾರ್ಯಗಳನ್ನು ತೀವ್ರವಾಗಿ ಹಚ್ಚಿಕೊಂಡು ಆ ದುಃಖವನ್ನು ಹತ್ತೊತ್ತಿಕೊಳ್ಳುತ್ತಿದ್ದನು. ಕಡೆಗೆ ಕನಕಲಕ್ಷ್ಮಿ ಮನಸ್ಸು ಗಟ್ಟಿಮಾಡಿ ಒಂದು ನಿಶ್ಚಯಕ್ಕೆ ಬಂದು, ಕೊನೆಯ ಉಪಾಯಕ್ಕೆ ಸಿದ್ಧಳಾದಳು.

ಒಂದುದಿನ ರಾತ್ರಿ ಅವಳು ಗಂಡನೊಂದಿಗೆ ತಾನು ನಿಶ್ಚಯಿಸಿದ ಉಪಾಯವನ್ನು ಹೇಳಿದಳು.

ಅದನ್ನು ಕೇಳಿ ಧನಗುಪ್ತನು ನಿಶ್ಚೇಷ್ಟನಂತಾಗಿ, "ನಿನ್ನ ಬುದ್ಧಿ ಸರಿಯಾಗಿಲ್ಲವೆಂಧೇ ಹೇಳಬೇಕು. ನೀನೇ ಸವತಿಯನ್ನು ತಂದಿಟ್ಟುಕೊಳ್ಳಲು ಹೇಳುವುದುಂಟೆ? ನೀನು ಹೇಳಿದಂತೆ ನಿನ್ನ ಚಿಕ್ಕಮ್ಮನ ಮಗಳು ಶ್ರೀಮತಿ ಎಲ್ಲಾ ವಿಧದಲ್ಲಿ ಯೋಗ್ಯಳೆಂಬುದು ನಿಜವೇ. ಆದರೆ ಆ ಹುಡುಗಿಯ ವಯಸ್ಸು ನಿನ್ನ ವಯಸ್ಸಿನ ಅರ್ಧಕ್ಕೂ ಇಲ್ಲ. ನನಗಂತೂ ನಡುವಯಸ್ಸು ಮೀರಿದೆ. ಇಂತಹ ಮದುವೆ ಯಾವ ವಿಧದಲ್ಲಿಯೂ ಶ್ರೇಯಸ್ಕರವಲ್ಲ." ಎಂದನು.

ಅವರಿಗೆ ತಮ್ಮ ಮಕ್ಕಳನ್ನು ದತ್ತಕೊಡಲು ಅನೇಕ ಬಂಧುಗಳು ನಾನು ತಾನೆಂದು ಮುಗಿಬೀಳುವವರಿದ್ದರು. ಆದರೆ ಗಂಡಹೆಂಡಿರಿಬ್ಬರಿಗೂ ದತ್ತು ತೆಗೆದುಕೊಳ್ಳಲು ಇಷ್ಟವಿರಲಿಲ್ಲ. ಎಷ್ಟಾದರೂ ದತ್ತಪುತ್ರನು ಸ್ವಂತಪುತ್ರನಾಗುವನೇ?

ಹೀಗೆ ಗಂಡನು ತನ್ನ ಆಲೋಚನೆಯನ್ನು ನಿರಾಕರಿಸಿದಂದಿನಿಂದ, ಕನಕಲಕ್ಷ್ಮಿ ಇನ್ನಿಷ್ಟು ದಿಗಿಲು ಬೀಳತೊಡಗಿದಳು. ಆ ಚಿಂತೆಯೇ ರೋಗಕ್ಕೆ ಮಾರ್ಪಟ್ಟು ಕೆಲವೇ ದಿನಗಳಲ್ಲಿ ಮರಣವನ್ನಪ್ಪಿದಳು. ಹೆಂಡತಿ ತೀರಿಹೋದ ಮೇಲೆ ಧನಗುಪ್ತನ ಸ್ವಭಾವದಲ್ಲಿ ದಿನೇ ದಿನೇ ವ್ಯತ್ಯಾಸವು ಕಾಣುತ್ತ ಬಂದಿತು.



ಹೆಂಡತಿಯ ಆಲೋಚನೆಯನ್ನು ಕೇಳದೆ, ಅವಳ ಸಾವಿಗೆ ತಾನೇ ಕಾರಣನಾದೆನೆಂದುಕೊಂಡು ಧನಗುಪ್ತನು ತನ್ನೊಳಗೇ ಬಾಧೆಪಡುತ್ತ, ಕಡೆಗೆ ಅವಳ ಆತ್ಮಶಾಂತಿಗಾಗಿಯಾದರೂ, ಅವಳು ಹೇಳಿದ ಹುಡುಗಿ ಶ್ರೀಮತಿಯನ್ನು ವಿವಾಹ ಮಾಡಿಕೊಳ್ಳಲು ನಿಶ್ಚಯಿಸಿದನು.

ಆಡಂಬರವೇನಿಲ್ಲದೆ ಶ್ರೀಮತಿಯೊಂದಿಗೆ ಧನಗುಪ್ತನ ವಿವಾಹವು ನಡೆದುಹೋಯಿತು. ಶ್ರೀಮತಿ ಸಂಸಾರಕ್ಕೆ ಬಂದು ಒಂದು ವರ್ಷವಾಗುವಷ್ಟರಲ್ಲಿ ಪುತ್ಥಳಿ ಬೊಂಬೆಯಂತಹ ಮಗನನ್ನು ಹಡೆದಳು. ಅವನಿಗೆ ಧನಗುಪ್ತನು ಲಕ್ಷ್ಮೀಪ್ರಸನ್ನನೆಂದು ತನ್ನ ತಂದೆಯ ಹೆಸರನ್ನೇ ಇಟ್ಟು, ಅತ್ಯಂತ ಅಕ್ಕರೆಯಿಂದ ಬೆಳೆಸತೊಡಗಿದನು.

ಲಕ್ಷ್ಮೀಪ್ರಸನ್ನನಿಗೆ ಹನ್ನೆರಡು ವರ್ಷ ವಯಸ್ಸಾಗುತ್ತಿರಲು, ಧನಗುಪ್ತನಿಗೆ ಎಪ್ಪತ್ತು ವರ್ಷ ವಯಸ್ಸು ಬಂದಿತು. ಈಗ ಅವನಿಗೆ ಮತ್ತೊಂದು ಚಿಂತೆ ಹಿಡಿದುಕೊಂಡಿತು. ಕೇಡೆಣಿಸಿ ಮೇಲೆಣಿಸೆನ್ನುವಂತೆ, ತನ್ನ ಅನಂತರ ಇಷ್ಟು ದೊಡ್ಡ ಆಸ್ತಿಪಾಸ್ತಿಗಳನ್ನು ಸಂರಕ್ಷಿಸಿಕೊಳ್ಳುವ ಕೆಲಸ ಒಬ್ಬಳು ಹೆಂಗುಸಿನಿಂದ ಸಾಧ್ಯವಾಗುವ ಮಾತಲ್ಲ, ಶ್ರೀಮತಿ ಇನ್ನೂ ಚಿಕ್ಕವಳೇ. ಅವಳಿಗೆ ಇನ್ನೂ ಎಷ್ಟೋ ಲೋಕಜ್ಞಾನ ಬರಬೇಕಾಗಿದೆ !

ಈ ಸಿಕ್ಕುಬಿದ್ದ ಸಮಸ್ಯೆಗೆ ವಿಮೋಚನೆ ಹೇಗೆಂದು ಧನಗುಪ್ತನು ಬಹಳವಾಗಿ ಆಲೋಚಿಸಿಕೊಂಡಿರುವಾಗ, ಫಕ್ಕನೆ ಒಂದು ಯೋಚನೆ ಮಿಂಚಿತು. ವ್ಯಾಪಾರಕ್ಕೆ ಹಾಕಿದ ಮೂಲಧನ, ಸ್ಥಿರಾಸ್ತಿಗಳು, ಚಿನ್ನ ಬೆಳ್ಳಿ, ವಜ್ರ, ವೈಡೂರ್ಯ ಮೊದಲಾದ ಕಬ್ಬಿಣದ ಪೆಟಾರಿ, ಕವಾಟು, ಪೆಟ್ಟಿಗೆಗಳಲ್ಲಿರುವ ಇತರ ಚರಸೊತ್ತುಗಳು ಸಾಧಾರಣವಾದುವೇನಲ್ಲ. ಲಕ್ಷ್ಮೀಪ್ರಸನ್ನನಿಗೆ ಯುಕ್ತವಯಸ್ಸು ಬರುವವರೆಗೆ ಆ ಧನವು ಕಾಪಾಡಲ್ಪಡದಿದ್ದರೆ ಪರರ ಪಾಲಾಗಬಹುದು. ಅದುವರೆಗೆ ನೋಡಿಕೊಳ್ಳುವಂತಹ ನಂಬುಗಸ್ಥನಾದವನೊಬ್ಬನು ಬೇಕು. ಅದಕ್ಕೆ ತಕ್ಕವನು ಹನುಮಯ್ಯನೇ ಎಂಬ ವಿಶ್ವಾಸ ಧನಗುಪ್ತನಿಗೆ ಉಂಟಾಯಿತು.

ಈ ಹನುಮಯ್ಯನು ಧನಗುಪ್ತನ ನೌಕರರಲ್ಲಿ ಒಬ್ಬನಾಗಿರುವವನು. ಚಿಕ್ಕಪ್ರಾಯದಲ್ಲೇ ಒಬ್ಬರ ಹಿಂದೊಬ್ಬರಂತೆ ತಂದೆಯನ್ನೂ ತಾಯಿಯನ್ನೂ ಕಳೆದುಕೊಂಡು ನಿರಾಧಾರನಾದ ಅವನನ್ನು ಧನಗುಪ್ತನು ಆದರಿಸಿ ಬೆಳೆಸಿ ದೊಡ್ಡವನಾಗುವಂತೆ ಮಾಡಿದ್ದನು. ಮನೆಯಲ್ಲಿಯೂ, ಅಂಗಡಿಯಲ್ಲಿಯೂ ಅವನು ಧನಗುಪ್ತನಿಗೆ ನೆರಳಿನೋಪಾದಿಯಲ್ಲಿರುವವನು. ಅವನಿಗೆ ತನ್ನ ಯಜಮಾನರ ಮೇಲೆ ಅಳೆಯಲಾಗದಷ್ಟು ಭಕ್ತಿ ವಿಶ್ವಾಸಗಳಿದ್ದುವು. ವ್ಯಾಪಾರದ ಮೇಲೆ ಹೊರ ದೇಶಗಳಿಗೆ ಹೋದಾಗ ಒಂದೆರಡು ಸಾರಿ ಧನಗುಪ್ತನನ್ನು ಪ್ರಾಣಾಪಾಯಗಳಿಂದ ತನ್ನ ಪ್ರಾಣವನ್ನೇ ಅಡ್ಡವಿಟ್ಟು ಕಾಪಾಡಿದ್ದನು.



ಹನುಮಯ್ಯ. ಇದನ್ನೆಲ್ಲ ನೆನೆದುಕೊಂಡು ಧನಗುಪ್ತನು ಒಂದು ದಿನ ರಾತ್ರಿ ಹನುಮಯ್ಯನನ್ನು ತನ್ನ ಏಕಾಂತದ ಕೊಟಡಿಗೆ ಕರೆದುಕೊಂಡು ಹೋಗಿ, "ಎಲೋ ಹನುಮಾ, ನಿನ್ನ ಮೇಲೆ ನನಗೆ ಎಷ್ಟು ನಂಬಿಕೆ ಯಿದೆ ಎಂಬುದು ನಿನಗೆ ಗೊತ್ತಿದೆಯಷ್ಟೆ? ನಾನು ನಿನಗೊಂದು ಅತಿಮುಖ್ಯವಾದ ಕೆಲಸ ಒಪ್ಪಿಸ ಬೇಕೆಂದಿದ್ದೇನೆ. ನೀನು ನಂಬುಗೆಯಾಗಿ ಆ ಕೆಲಸ ಮಾಡುತ್ತೇನೆಂದು ಪ್ರಮಾಣಮಾಡಿ ಹೇಳಬೇಕು." ಎಂದನು.

"ಅಯ್ಯಾ, ನಿಮ್ಮ ಮಾತನ್ನು ನಾನು ಯಾವಾ ಗಾದರೂ ಅಲ್ಲವೆಂದಿದ್ದೇನೆಯೇ? ನಿಮ್ಮ ಪಾದ ಮುಟ್ಟಿ ಪ್ರಮಾಣಮಾಡಿ ನಿಮ್ಮ ಆಜ್ಞೆಯನ್ನು ನೆರವೇರಿಸುತ್ತೇನೆ." ಎಂದನು ಹನುಮಯ್ಯ.

"ನನ್ನ ಪಾದ ಮುಟ್ಟಿ ಮಾಡುವ ಪ್ರಮಾಣ ಅಷ್ಟು ಮುಖ್ಯವೇನಲ್ಲ. ನೀನು ಪೂಜಿಸುವ ಶ್ರೀರಾಮಚಂದ್ರನ ಪಟವನ್ನು ತಲೆಯ ಮೇಲಿಟ್ಟು ಕೊಂಡು ಪ್ರಮಾಣಮಾಡು. ನನಗೆ ತೃಪ್ತಿಯಾಗು ತ್ತದೆ." ಎಂದನು ಧನಗುಪ್ತ.

ಹನುಮಯ್ಯನು ಹಾಗೆಯೇ ಪ್ರಮಾಣ ಮಾಡಿ ಹೇಳಿದನು.

ಆಗ ಧನಗುಪ್ತನು ಮುಖ್ಯ ವಿಷಯ ಹೇಳ ತೊಡಗಿ, "ನೋಡು ಹನುಮಯ್ಯಾ, ನಾನು ಬದುಕಿದಷ್ಟು ಕಾಲ ಇನ್ನು ಮೇಲೆ ಬದುಕಲಾರೆ ನಷ್ಟೆ? ವಯಸ್ಸು ಹೊರಳಿಹೋಗುತ್ತಿರುವ ಹಾಗೆ ನಮ್ಮ ಮಗ ಲಕ್ಷ್ಮೀಪ್ರಸನ್ನನನ್ನು ಕುರಿತು ಚಿಂತೆ ನನ್ನನ್ನು ಕೊರೆಯುತ್ತಾ ಇದೆ. ತಾತ ಮುತ್ತಾತರ ಕಾಲದಿಂದ ಉಳಿದು ಬಂದಿರುವ ಆಸ್ತಿ, ನಮ್ಮ ವಂಶದಿಂದ ತಪ್ಪಿಹೋಗುವುದೇನೋ ಎಂಬ ಚಿಂತೆ ನನ್ನನ್ನು ಕಾಡುತ್ತಿದೆ. ಈ ಆಸ್ತಿಪಾಸ್ತಿಗಳನ್ನು ಉಳಿಸಿಕೊಡಬೇಕಾದವನು ನೀನೇ ಎಂದು ನಾನು ನಿಶ್ಚಯಿಸಿದ್ದೇನೆ." ಎಂದನು.

ಆಮೇಲೆ ಧನಗುಪ್ತನು ಹನುಮಯ್ಯನಿಗೆ ಹೇಳ ಬೇಕಾದುದನ್ನೆಲ್ಲಾ ಹೇಳಿದನು. ಇದು ನಡೆದ ಆರು ತಿಂಗಳ ಮೇಲೆ, ಅಕಸ್ಮಾತ್ತಾಗಿ ಧನಗುಪ್ತನು ನೆಮ್ಮದಿಯಾಗಿ ತೀರಿಹೋದನು. ಆಮೇಲೆ ಧನಗುಪ್ತನ ಕುಟುಂಬವನ್ನು ಹನುಮಯ್ಯನು ತನ್ನ ಕಣ್ಣುಬೊಂಬೆಗಳಂತೆ ನೋಡಿಕೊಳ್ಳುತ್ತಾ ಬಂದನು. ಯಜಮಾನನಿಲ್ಲವೆಂಬ ಲೋಪ ಎಲ್ಲಿಯೂ ಕಾಣದಂತೆ ವ್ಯಾಪಾರ ವ್ಯವಹಾರಗಳು ನಡೆದು ಕೊಂಡಿದ್ದುವು.

ಅಪರ ಕುಬೇರನಂತಹ ಧನಗುಪ್ತನ ಐಶ್ವರ್ಯಕ್ಕೆ ಹನುಮಯ್ಯನಂತಹ ನೌಕರನೊಬ್ಬನು ಸಂರಕ್ಷಕ ನಾಗಿರುವನೆಂಬುದು ಅನೇಕರಿಗೆ ಆಶ್ಚರ್ಯವೆನಿಸಿತು. ಇನ್ನು ಕೆಲವರ ಅಸಮಾಧಾನಕ್ಕೂ ಕಾರಣ ವಾಯಿತು. ತಕ್ಕ ಜಾಗರೂಕತೆ ವಹಿಸದೆ ಹೋದರೆ, ತಾಯಿಮಗಂದಿರಿಗೆ ಹನುಮಯ್ಯನು ದ್ರೋಹ ಮಾಡುವನೆಂದು ಕೂಡಾ ಅನೇಕರು ಭಾವಿಸಿದರು.

ಈ ವಿಷಯದಲ್ಲಿ ಕೆಲವು ಸಮೀಪವರ್ತಿಗಳು ಶ್ರೀಮತಿಯನ್ನು ಎಚ್ಚರಿಸಲಿಕ್ಕೂ ತೊಡಗಿದರು.

ಈ ಬಗೆಯ ದೂರುಗಳನ್ನು ಕೇಳಿ ಕೇಳಿ ಶ್ರೀಮತಿಗೆ ಕೂಡಾ ಹನುಮಯ್ಯನ ಮೇಲೆ ಅನುಮಾನ ಬಂತು. ಅವಳು ಒಂದುದಿನ ಅವನೊಂದಿಗೆ, "ಹನುಮಯ್ಯಾ, ಲಕ್ಷ್ಮೀಪ್ರಸನ್ನನಿಗೆ ತನ್ನ ಸ್ವಂತ ಕಾಲುಗಳ ಮೇಲೆ ನಿಲ್ಲುವಂತಹ ವಯಸ್ಸು ಬರುತ್ತಾ ಇದೆ. ಅವನ ತಂದೆಯವರು ಚರಸೊತ್ತನ್ನೆಲ್ಲಾ ನಿನ್ನ ಕಾವಲಿನಲ್ಲಿ ಇರಿಸಿದ್ದೇನೆಂದು ಹೇಳಿದ್ದಾರೆಯೇ ಹೊರತು, ಅದು ಎಲ್ಲಿ ಇದೆ ಎಂಬುದನ್ನು ಮಾತ್ರ ಹೇಳಲಿಲ್ಲ. ನಿನಗೆ ಹೇಳಿರಬೇಕು" ಎಂದಳು.

ಅದಕ್ಕೆ ಹನುಮಯ್ಯ "ಹೌದಮ್ಮ, ಅಯ್ಯಾ ಅವರು ಆ ಸೊತ್ತನ್ನೆಲ್ಲಾ ಸಣ್ಣ ಯಜಮಾನರಿಗೆ ಇಪ್ಪತ್ತು ವಯಸ್ಸು ತುಂಬಿದ ಕೂಡಲೇ ಒಪ್ಪಿಸಬೇಕೆಂದು ಹೇಳಿದ್ದಾರೆ. ನಾನೂ ಪ್ರಮಾಣಪೂರ್ವಕವಾಗಿ ಒಪ್ಪಿದ್ದೇನೆ, ಇನ್ನೊಂದು ತಿಂಗಳಿನಲ್ಲಿ ಅವರಿಗೆ ಇಪ್ಪತ್ತು ತುಂಬಲಿದೆಯಷ್ಟೆ? ನೀವು ಸ್ವಲ್ಪ ಸಹನೆಯಿಂದ ಇರಬೇಕು ಅಮ್ಮಾ" ಎಂದನು.

ಕಡೆಗೆ ಆದಿನ ಬಂದೇ ಬಂದಿತು. ಹನುಮಯ್ಯನು ಎರಡು ಬಲವಾದ ಕುದುರೆಗಳನ್ನು ಹೂಡಿದ ಬಂಡಿಯನ್ನು ತಂದು ಲಕ್ಷ್ಮೀಪ್ರಸನ್ನನನ್ನು ಅದರಲ್ಲಿ ಏರಿಸಿಕೊಂಡು ಊರಹೊರಗಿನ ಕಾಡಿನೊಳಗೆ ಪ್ರವೇಶಮಾಡಿದನು. ಒಂದು ಗುಡ್ಡದ ಹತ್ತಿರ ಬಂಡಿಯನ್ನು ನಿಲ್ಲಿಸಿ, ಇಬ್ಬರೂ ಗುಡ್ಡವನ್ನು ಹತ್ತಿ, ಕೆಳಗಿರುವ ಕಣಿವೆಗೆ ಇಳಿದರು. ಅಲ್ಲಿ ಎರಡು ಭಾರಿಯಾದ ಬಂಡೆಕಲ್ಲುಗಳ ಮಧ್ಯದಲ್ಲಿರುವ ಖಾಲೀ ಸ್ಥಳಕ್ಕೆ ಹೋಗಿ ಹನುಮಯ್ಯನು ನಿಂತನು. ಮರುಕ್ಷಣದಲ್ಲಿ ಅವನ ಮುಖವು ಮಾರ್ಪಟ್ಟಿತು. ಕಣ್ಣುಗಳು ದೊಡ್ಡದಾದುವು. ತಲೆಕೂದಲನ್ನು ಹುಚ್ಚನಹಾಗೆ ಬರಬರ ಕೆರೆದುಕೊಂಡನು. ಮುಖವನ್ನು ವಿಕಾರಮಾಡಿ ಸೊಟ್ಟ ಬಾಯಿಯಿಂದ ಹಲ್ಲು ಕಿರಿದು ಲಕ್ಷ್ಮೀಪ್ರಸನ್ನನನ್ನು ಚುರುಚುರು ನೋಡಿದನು.





ಅದನ್ನು ನೋಡಿ ಲಕ್ಷ್ಮೀಪ್ರಸನ್ನನು ಹೆದರುತ್ತೆ, "ನಿನಗೇನಾಯಿತು ಹನುಮಯ್ಯಾ ! ನಾವು ಇಲ್ಲಿಗೆ ಬಂದದ್ದು ತಂದೆಯವರು ಅಡಗಿಸಿಟ್ಟ ಸೊತ್ತು ಅಗೆದುಕೊಳ್ಳಲಿಕ್ಕೆ ಎಂದು ಹೇಳಿದೆಯಲ್ಲಾ !" ಎಂದನು.

"ತಂದೆಯವರು ಅಡಗಿಸಿದ ಸೊತ್ತು ! ಯಾರೋ ನೀನು ? ಇಲ್ಲಿ ಎಲ್ಲಿಂದ ಬಂದೆಯೋ !" ಎಂದು ಕಣ್ಣು ಕೆಂಪುಮಾಡಿಕೊಂಡು ಅರಚಿದನು ಹನುಮಯ್ಯ.

ಲಕ್ಷ್ಮೀಪ್ರಸನ್ನನು ಮತ್ತಿಷ್ಟು ಹೆದರಿ ಅಲ್ಲಿಂದ ಓಡುತ್ತಾ ಮನೆಗೆ ಹೋಗಿ ನಡೆದ ಸಂಗತಿಯನ್ನು ತಾಯಿಯೊಂದಿಗೆ ಹೇಳಿದನು.

ಅದನ್ನು ಕೇಳಿ ಶ್ರೀಮತಿ ಅತ್ಯಾಶ್ಚರ್ಯ ಪಡುತ್ತಿರಲು, ಹನುಮಯ್ಯನು ಏನೂ ತಿಳಿಯದವನಂತೆ ಅಲ್ಲಿಗೆ ಬಂದು, ಅವರ ಮುಂದೆ ನಿಂತನು. ಮಗನು ಹೇಳಿದ ಸಂಗತಿಯನ್ನು ಅವಳು ಅವನಿಗೆ ಹೇಳಿ "ಅಲ್ಲಿಗೆ ಹೋದ ಕೂಡಲೇ ಏನಾಯಿತು ನಿನಗೆ ಹನುಮಯ್ಯ ?" ಎಂದು ಕೇಳಿದಳು.

"ಹಾಗೇನು ? ಇವರು ಯಾಕೆ ಓಡಿಬಂದರೋ ನನಗೆ ಅರ್ಥವಾಗದೆ, ಹಿಂದೆಯೇ ಬಂದೆನು. ನಾನೇನೂ ಹಾಗೆಲ್ಲಾ ಮಾಡಲೇ ಇಲ್ಲಮ್ಮಾ !" ಎಂದನು ಆಶ್ಚರ್ಯದಿಂದ.

ಶ್ರೀಮತಿಗೆ ಹನುಮಯ್ಯನ ಮೇಲೆ ಅನುಮಾನ ಬಂತು. ತನ್ನ ಗಂಡನು ಅಡಗಿಸಿದ ಸೊತ್ತನ್ನು ಅಪಹರಿಸಲು ಏನೋ ಮೋಸಮಾಡುತ್ತಾನೆಂದು ಅವಳಿಗೆ ತೋರಿತು.

ಮಾರಣೇದಿನ ಅವಳು ಮಗನನ್ನು ಕರೆದುಕೊಂಡು ಆ ಕಣಿವೆಗೆ ಹೋದಳು. ಹನುಮಯ್ಯನೂ ಅವರೊಂದಿಗಿದ್ದನು. ಈಸಾರಿ ಹನುಮಯ್ಯ ಬಂಡೆಗಳ ನಡುವಿನ ಖಾಲೀಸ್ಥಳದಲ್ಲಿ ನಿಂತ ಕೂಡಲೇ, ಥಕ್ಕನೆ ಮುಖ ವಿಕಾರ ಮಾಡಿಕೊಂಡು ಹುಚ್ಚನಹಾಗೆ ಅರಚಿ ಹಾರುತ್ತ ತಾಯಿ ಮಗಂದಿರನ್ನು ಹೊಡೆಯುವಂತೆ ಕೈಕಾಲಾಡಿಸಿದನು.

ಇದನ್ನು ನೋಡಿ ಶ್ರೀಮತಿಗೆ ಭಯವೂ, ಸೊತ್ತು ಪೂರಾ ಹೋಗುತ್ತದೆಂಬ ದುಃಖವೂ ಉಂಟಾಯಿತು. ಮಗನನ್ನು ಕರೆದುಕೊಂಡು ಬೇಗ ಬೇಗನೇ ಅಲ್ಲಿಂದ ಮನೆಗೆ ಹಿಂದಿರುಗಿದಳು. ಹನುಮಯ್ಯನೂ ಏನೂ ಅರಿಯದವನಂತೆ ಅವರ ಹಿಂದೆಯೇ ಇದ್ದನು. ತಾನು ಹಾಗೆಲ್ಲಾ ಮಾಡಿದೆನೇ, ಎಂದು ಹನುಮಯ್ಯನು ಆಶ್ಚರ್ಯಪಡುತ್ತಾ, "ಹಾಗಾದರೆ ಯಾರಾದರೂ ದೊಡ್ಡವರೂ ನಮ್ಮೊಂದಿಗೆ ಬರಲಿ. ನಾನು ಹಾಗೆಲ್ಲಾ ಮಾಡಿದರೆ ನನ್ನನ್ನು ಕಟ್ಟಿಹಾಕಿ ನಾನು ಹೇಳಿದ ಜಾಗದಲ್ಲಿ ಅಗೆಯಿಸಿರಿ" ಎಂದನು.

ಅದರಂತೆ ಮರುದಿನ ಕೆಲವರು ದೊಡ್ಡ ಮನುಷ್ಯರೊಂದಿಗೆ ಹನುಮಯ್ಯನು ತಾಯಿ ಮಗಂದಿರನ್ನು ಆ ಕಣಿವೆಗೆ ಕರೆದೊಯ್ದನು. ಈಸಾರಿ

ಅವನೇ ಒಂದು ಸ್ಥಳದಲ್ಲಿ ಭಕ್ತಿಯಿಂದ ನಮಸ್ಕಾರ ಮಾಡಿ ಅಗೆಯತೊಡಗಿದನು. ಅಗೆದಷ್ಟೂ ದೊಡ್ಡ ದೊಡ್ಡ ತಾಮ್ರದ ಗುಡಾಣಗಳನೇಕ ಹೊರ ಬಿದ್ದುವು. ಅವುಗಳಲ್ಲಿ ಅಮೂಲ್ಯವಾದ ರತ್ನ ವಜ್ರ ಬಂಗಾರಗಳಿದ್ದುವು.

ಎಲ್ಲರಿಗೂ ಸಂತೋಷವಾಯಿತು. ಆದರೆ ಈ ಮೊದಲು ಎರಡುಸಾರಿ ಹನುಮಯ್ಯನು ಹಾಗೇಕೆ ಪ್ರವರ್ತಿಸಿದನೆಂಬುದು ಯಾರಿಗೂ ಅರ್ಥವಾಗಲಿಲ್ಲ.

ಬೇತಾಳವು ಹೀಗೆ ಕಥೆಯನ್ನು ನಿಲ್ಲಿಸಿ, "ರಾಜಾ, ಹನುಮಯ್ಯನ ಮನಸ್ಸು ಹೇಗಿದ್ದಿತೆಂದು ನಿನ್ನ ಅಭಿಪ್ರಾಯ? ಅವನು ಧನಗುಪ್ತನ ನಿಧಿಯನ್ನು ಮೋಸಪಡಿಸಿ ವಶಪಡಿಸಿಕೊಳ್ಳುವ ಆಲೋಚನೆಯಲ್ಲಿದ್ದನೋ? ಆ ಧನದಿಂದ ಗುಲಾಮತನದಿಂದ ಮುಕ್ತನಾಗಬಹುದೆಂದು ಅಂದುಕೊಂಡನೋ? ಹಾಗೆಯೇ ಶ್ರೀಮತಿಗೂ ತೋರಿದ್ದಿತಷ್ಟೆ? ಹಾಗಿದ್ದರೆ ಮೂರನೇಸಾರಿ ಅವನೇ ಅಗೆದು ನಿಧಿಗಳನ್ನು ತೆಗೆದುಕೊಟ್ಟನೇಕೆ? ಹಾಗೆ ಅಪಹರಿಸಿದರೆ ಪಾಪವೆಂದು ಪಶ್ಚಾತ್ತಾಪಪಟ್ಟನೆ? ಅಥವಾ ಹೆದರಿದನೆ? ಧೈರ್ಯ ಸಾಲದೆ ಹೋಯಿತೆ? ಇದಕ್ಕೆ ಸರಿಯಾದ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆಯೊಡೆಯುತ್ತದೆ" ಎಂದು ಸುಮ್ಮನಾಯಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು:

"ಹನುಮಯ್ಯನಲ್ಲಿ ಅಂತಹ ಲೋಪದೋಷಗಳಾವುದೂ ಇಲ್ಲ. ತನ್ನನ್ನು ಕಾಪಾಡಿದ ಯಜಮಾನನ ಮೇಲೆಯೂ, ಅವನ ಕುಟುಂಬದ ಮೇಲೆಯೂ ನಿಜವಾಗಿಯೂ ಭಕ್ತಿವಿಶ್ವಾಸಗಳುಳ್ಳವನೇ. ಅದು ಗುಲಾಮತನ ಅಲ್ಲವೇ ಅಲ್ಲ. ಧನಗುಪ್ತನ ಎರಡನೇ ಹೆಂಡತಿಗೂ ಮಗನಿಗೂ ಹುನುಮಯ್ಯನ ಪ್ರಾಮಾಣಿಕತೆ ಚೆನ್ನಾಗಿ ತಿಳಿದಿರಲು ಸಾಧ್ಯವಿಲ್ಲ. ಶ್ರೀಮತಿ ಅವನನ್ನು ಸಂದೇಹಿಸಿ ಧನವು ಎಲ್ಲಿ ಅಡಗಿರಿಸಲ್ಪಟ್ಟಿದೆ ಎಂದು ವಿಚಾರಿಸಿದ್ದಾಳಷ್ಟೆ? ಅದರಿಂದ ಅವಳಿಗೆ ತನ್ನ ಗಂಡನು ಅಡಗಿಸಿಟ್ಟ ಧನವನ್ನು ಹನುಮಯ್ಯನು ಅಪಹರಿಸಿರಬಹುದೆಂದು ಶಂಕೆ ತೋರಿದೆ ಎಂದಾಯಿತು. ಅಂತಹವರು ನಾಳೆ ಧನಗುಪ್ತನ ಸೊತ್ತಿನಲ್ಲಿ ಸ್ವಲ್ಪ ಅವನೂ ಕದ್ದಿರುವನೆಂದು ಅಪವಾದ ಹಾಕಿದರೆ ಹನುಮಯ್ಯನು ತಪ್ಪಿಸಲು ಸಾಧ್ಯವಾಗದು. ಅದನ್ನೆಲ್ಲ ಯೋಚಿಸಿಯೇ ಹನುಮಯ್ಯನು ಎರಡು ಸಾರಿ ಹುಚ್ಚನ ಹಾಗೆ ಪ್ರವರ್ತಿಸಿ, ಮೂರನೇ ಸಾರಿ ನಾಲ್ವರು ದೊಡ್ಡ ಮನುಷ್ಯರ ಎದುರಿನಲ್ಲಿ ಅಡಗಿಸಿಡಲ್ಪಟ್ಟ ಸೊತ್ತನ್ನು ಹೊರಗೆ ತೆಗೆದಿದ್ದಾನೆ."

ಹೀಗೆ ತ್ರಿವಿಕ್ರಮನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಹಾರಿಹೋಗಿ, ಎಂದಿನಂತೆ ಮರದಕೊಂಬೆಯಲ್ಲಿ ನೇತಾಡಿತು.



# ತಾಪತ್ರಯ

ರಂಗಪ್ಪನೆಂಬ ಕಟ್ಟಿಗೆ ಒಡೆದು ಮಾರಿ ಜೀವಿಸುವವನು, ಒಂದು ದಿನ ಕಾಡಿನಲ್ಲಿ ತುಂಬಾ ಕಟ್ಟಿಗೆಗಳನ್ನು ಒಡೆದು ರಾಶಿಮಾಡಿ, ಆಯಾಸದಿಂದ ಉಸಿರುಬಿಡುತ್ತ ಸ್ವಲ್ಪ ನಿಂತನು.

ಆ ಸಮಯದಲ್ಲಿ ಆ ದಾರಿಯಾಗಿ ಹೋಗುತ್ತಿದ್ದ ಸನ್ಯಾಸಿಯೊಬ್ಬನು ಅವನನ್ನು ನೋಡಿ, "ಇಷ್ಟು ಕಟ್ಟಿಗೆಗಳನ್ನು ಯಾಕೆ ಒಡೆಯಬೇಕಿತ್ತು? ಒಂದು ದಿನದ ಖರ್ಚಿಗೆ ಇಷ್ಟುಬೇಕೆ? ಸ್ವಲ್ಪವೇ ಒಡೆದಿದ್ದರೆ ಈ ದಿನಕ್ಕೆ ಸಾಕಾಗುತ್ತಿತ್ತಷ್ಟೆ?" ಎಂದನು.

ರಂಗಪ್ಪನು ದೊಡ್ಡದೊಂದು ಉಸಿರು ತೆಗೆದು, "ಈ ದಿನ ಒಡೆದ ಈ ಕಟ್ಟಿಗೆಗಳಿಂದ ಮೂರು ದಿನ ಹೊಟ್ಟೆಗೆ ಕಷ್ಟಪಡಬೇಕಾಗಿಲ್ಲ. ಮೂರು ದಿನವೂ ಕಾಡಿಗೆ ಬಾರದೆ ಹಾಯಾಗಿ ಮನೆಯಲ್ಲೇ ಇದ್ದು ವಿಶ್ರಾಂತಿ ತೆಗೆದುಕೊಳ್ಳುತ್ತೇನೆ" ಎಂದನು.

ಸನ್ಯಾಸಿ ಕನಿಕರಿಸುವವನಂತೆ ರಂಗಪ್ಪನನ್ನು ನೋಡಿ, "ಅಪ್ಪಾ, ಈ ಶರೀರ ಇನ್ನೊಂದು ಕ್ಷಣದಲ್ಲಿ ಏನಾಗುತ್ತದೋ ಹೇಳಲು ಸಾಧ್ಯವಿಲ್ಲ. ಹಾಗಿರುವಾಗ ನಾಳೆ ಎಂಬುದಕ್ಕಾಗಿ ಇಷ್ಟು ತಾಪತ್ರಯವೇಕೆ ಹೇಳು?" ಎಂದು ಕೇಳಿದನು.

ರಂಗಪ್ಪನು ಅವನ ಕಾಟಕ್ಕೆ ರೇಗಿದವನಂತೆ, "ನಾನು ನಾಳೆಯವರೆಗೆ ಬದುಕಿರದಿದ್ದರೆ ಯಾವ ಗೊಡವೆಯೂ ಇಲ್ಲ. ಬದುಕಿದ್ದರೆ ಕಾಡಿಗೆ ಬರಬೇಕಾದ ಶ್ರಮ ತಪ್ಪುವುದಿಲ್ಲವೇನು?" ಎಂದು ಹುಬ್ಬು ಗಂಟಿಕ್ಕಿ ಕೊಂಡನು.

ಸನ್ಯಾಸಿ ಒಂದು ಕ್ಷಣ ಬೆರಗಾಗಿ, "ಇಷ್ಟೊಂದು ಲೋಕಜ್ಞಾನ, ತಾರ್ಕಿಕ ಬುದ್ಧಿ ನನ್ನ ಗುರುವಿಗೂ ಇಲ್ಲವಲ್ಲ!" ಎಂದು ಗೊಣಗುತ್ತ ಹಿಂದಿರುಗಿ ನೋಡದೆ ಹೊರಟುಹೋದನು.





# ಬುದ್ಧಿವಂತರು

ಹಿಂದೆ ಉಜ್ಜೈಕಿ ಸ್ಥಾನದಲ್ಲಿ ಒಬ್ಬ ಬಡವನಿದ್ದನು. ಅವನಿಗಿರುವ ಮೂವರು ಗಂಡು ಮಕ್ಕಳು ಬಾಲ್ಯವನ್ನು ಕಳೆದು ದೊಡ್ಡವರಾದರು. ತಂದೆ ಒಂದು ದಿನ ತನ್ನ ಮೂವರು ಮಕ್ಕಳೊಂದಿಗೆ, "ಮಕ್ಕಳೇ, ನಮಗೆ ದನಗಳ ಮಂದೆ ಇಲ್ಲ. ಚಿನ್ನ ಬೆಳ್ಳಿಗಳೂ ಇಲ್ಲ. ಆದುದರಿಂದ ನೀವು ಜ್ಞಾನಧನವನ್ನೇ ಸಂಪಾದಿಸಿಕೊಂಡು ಬುದ್ಧಿವಂತಿಕೆಯನ್ನೇ ಆಸ್ತಿಯಾಗಿ ಭಾವಿಸಿ ಬದುಕ ಬೇಕಾಗಿದೆ" ಎಂದು ಬೋಧಿಸಿದನು.

ಮಗಂದಿರು ತಂದೆಯ ಬುದ್ಧಿವಾದದಂತೆಯೇ ನಡೆದು,ವಯಸ್ಸಿಗೆ ಬರುತ್ತಿದ್ದರು. ತಂದೆ ತೀರಿಹೋದ ಮೇಲೆ ಅವರು ಆ ಊರನ್ನು ಬಿಟ್ಟು ಬದುಕುವ ದಾರಿ ಹುಡುಕುತ್ತ ಎಲ್ಲಿಗೋ ಹೊರಟರು.

ಕೆಲವು ದಿನ ನಡೆದ ಮೇಲೆ, ಒಂದು ನಗರವು ಕಾಣ ತೊಡಗಿತು. ಆ ನಗರದಲ್ಲಿ ತಮಗೆ ಕೆಲಸ ಸಿಗಬಹುದೆಂದುಕೊಂಡು ಅಲ್ಲಿಗೇ ಹೋಗುತ್ತಿದ್ದರು.

ತಲೆ ತಗ್ಗಿಸಿ ದಾರಿಯನ್ನೇ ನೋಡಿಕೊಂಡು ನಡೆಯುತ್ತಿದ್ದ ಹಿರಿಯಣ್ಣನು ತಟ್ಟನೆ ನಿಂತು,."ಸ್ವಲ್ಪ ಹೊತ್ತಿನ ಕೆಳಗೆ ಈ ದಾರಿಯಲ್ಲಿ ದೊಡ್ಡದೊಂದು ಒಂಟೆ ಹೋಗಿದೆ" ಎಂದನು.

ಮತ್ತೆ ಸ್ವಲ್ಪ ಮುಂದೆ ಹೋಗುತ್ತಿರಲು, ಎರಡನೆಯವನು "ಹೌದು ಹೌದು. ಅದಕ್ಕೆ ಒಂದು ಕಣ್ಣು ಕುರುಡು" ಎಂದನು.

ಇನ್ನಿಷ್ಟು ಮುಂದೆ ಹೋದ ಮೇಲೆ ಮೂರನೆಯವನು, "ಒಂಟೆಯ ಮೇಲೆ ಒಬ್ಬಳು ಹೆಂಗುಸು, ಒಂದು ಮಗುವಿನೊಂದಿಗೆ ಕುಳಿತಿದ್ದಾಳೆ" ಎಂದನು.

ಅವರು ಮೂವರೂ ಇನ್ನಿಷ್ಟು ಮುಂದೆ ಹೋಗುವಾಗ, ಹಿಂದಿನಿಂದ ಒಬ್ಬ ಮನುಷ್ಯನು ಕುದುರೆಯ ಮೇಲೆ ಕುಳಿತುಕೊಂಡು ಬಂದು, ಮೂವರು ಸಹೋದರರನ್ನು ನೋಡಿ, ಕುದುರೆ ನಿಲ್ಲಿಸಿದನು.

ಅವನು ಆಚೆಗೂ ಈಚೆಗೂ ನೋಡಿಕೊಂಡೇ ಬಂದಿದ್ದನು. ಈಗಲೂ ಹಾಗೆಯೇ ಏನನ್ನೋ ಹುಡುಕುವಂತೆ ಕಂಡನು.

ಅದನ್ನು ನೋಡಿ ದೊಡ್ಡಣ್ಣನು, "ಅಯ್ಯಾ, ಏನನ್ನೋ ಹುಡುಕುವ ಹಾಗೆ ಕಾಣುವಿರಿ. ಒಂಟೆ ಗಿಂಟೆ ಅಲ್ಲವಷ್ಟೆ ?" ಎಂದನು.

"ಹೌದು, ಒಂಟೆಯನ್ನೇ ಹುಡುಕುವುದು. ಅದು ಎತ್ತಕಡೆಗೆ ಹೋಯಿತೋ ?" ಎಂದನು ಕುದುರೆಯ



ಮೇಲೆ ಬಂದವನು. “ದೊಡ್ಡ ಒಂಟೆ ಹೌದೇ?” ಎಂದು ದೊಡ್ಡವನು ಪುನಃ ಕೇಳಿದನು.

“ಹೌದು. ನೀವು ನೋಡಿದಿರೇನು ಅದನ್ನು?” ಎಂದು ಕುದುರೆಯವನು ಕೇಳಿದನು.

“ಅದರ ಎಡದ ಕಣ್ಣು ಕುರುಡು ತಾನೆ?” ಎಂದು ಎರಡನೇಯವನು ಪ್ರಶ್ನಿಸಿದನು.

“ಅದರ ಮೇಲೆ ಒಬ್ಬಳು ಹೆಂಗುಸು, ಮಗುವನ್ನು ಎತ್ತಿಕೊಂಡು ಕೂತಿದ್ದಳಲ್ಲವೆ?” ಎಂದು ಮೂರನೆಯುವನು ಕೇಳಿದನು.

“ನಿಜ ನಿಜ. ನಿಮ್ಮ ಮೂವರ ಮಾತೂ ನಿಜ. ನೀವು ಅದನ್ನು ನೋಡಿದ್ದೀರೆಂದಾಯಿತು. ಆ ಒಂಟೆ ಎಲ್ಲಿಗೆ ಹೋಯಿತೋ ಹೇಳಿರಿ” ಎಂದನು ಕುದುರೆಯಲ್ಲಿ ಬಂದವನು.

“ನಾವು ನಿಮ್ಮ ಒಂಟೆಯುನ್ನು ನೋಡಲೇ ಇಲ್ಲ” ಎಂದು ಮೂವರೂ ಹೇಳಿದ್ದು ಕೇಳಿ, ಕುದುರೆಯವನಿಗೆ ಬೆರಗು ಬಡೆದಂತಾಯಿತು.

ಒಂಟೆಯನ್ನು ಕಳೆದುಕೊಂಡ ಅವನಿಗೆ ಆ ಮೂವರೂ ಸಹೋದರರ ಮೇಲೆ ಏನೋ ಅನುಮಾನ ಬಂತು. “ಆಟ ತೋರಿಸುವಿರೇನು? ನನ್ನ ಒಂಟೆಯನ್ನೂ,—ಅದರ ಮೇಲಿರುವ ನನ್ನ ಹೆಂಡತಿಯನ್ನೂ, ಮಗನನ್ನೂ ಏನು ಮಾಡಿದಿರೆಂದು ಹೇಳದೆ ಹೋದರೆ, ನಿಮ್ಮನ್ನು ಬಾದಶಹರ ಬಳಿಗೆ ಎಳೆದುಕೊಂಡು ಹೋಗುತ್ತೇನೆ” ಎಂದನು ಕುದುರೆಯವನು.

“ಸತ್ಯವಾಗಿಯೂ ನಾವು ನಿಮ್ಮ ಒಂಟೆಯನ್ನಾಗಲಿ, ಹೆಂಡತಿಯನ್ನಾಗಲಿ, ಮಗನನ್ನಾಗಲಿ ನೋಡಲೇ ಇಲ್ಲ. ನೀವು ಈ ದಿಕ್ಕಿನಲ್ಲಿ ಹೋದರೆ ನಿಮಗೆ ಒಂಟೆ ಸಿಗಬಹುದು” ಎಂದರು ಅಣ್ಣ ತಮ್ಮಂದಿರು.

“ನೀವು ಕಣ್ಣಿನಿಂದ ನೋಡದ ಒಂಟೆಯನ್ನೂ ಅದರ ಮೇಲಿದ್ದವರನ್ನೂ ಸರಿಯಾಗಿ ಹೇಗೆ ವರ್ಣಿಸಿದಿರಿ? ನಡೆಯಿರಿ ಬಾದಶಹರ ಬಳಿಗೆ.” ಎಂದು ಕುದುರೆಯ ಸವಾರನು ಜೋರು ಮಾಡಿದನು.

“ನಾವು ಹೇಗೆ ಹೇಳಿದೆವೆಂಬುನ್ನು ಹೇಳಿದರೂ ನೀವು ನಂಬಲಾರಿರಿ. ಬಾದಶಹರು ನಂಬಿದರೆ ನಮ್ಮ ಪುಣ್ಯ” ಎಂದು ಸಹೋದರರು ಕುದುರೆ ಸವಾರನೊಂದಿಗೆ ಬಾದಶಹನಲ್ಲಿಗೆ ಹೊರಟರು. ಕುದುರೆಯವನು ಬಾದಶಹನೊಂದಿಗೆ, ಅವರು ತನ್ನ ಒಂಟೆಯನ್ನು ಹೆಂಡತಿ ಮಗನೊಂದಿಗೆ ತಸ್ಕರಿಸಿದರೆಂದು ಫಿರ್ಯಾದಿ ಮಾಡಿದನು.

“ಅವರು ತಸ್ಕರಿಸಿದರೆನ್ನಲು ಆಧಾರವೇನಿದೆ?” ಎಂದು ಬಾದಶಹನು ಕೇಳಿದನು.

“ನನ್ನ ಒಂಟೆ ದೊಡ್ಡದೆಂದೂ, ಅದರ ಒಂದು ಕಣ್ಣು ಕುರುಡು ಎಂದೂ, ಅದರ ಮೇಲೆ ಒಬ್ಬಳು ಹೆಂಗುಸೂ, ಮಗುವೂ ಇರುವರೆಂದೂ ಸರಿಯಾಗಿಯೇ ಹೇಳಿದ್ದಾರೆ. ಆಮೇಲೆ ನೋಡಲೇ ಇಲ್ಲವೆಂದು ಸಾಧಿಸುತ್ತಾರೆ. ಏನೂ ನೋಡದವರು ಆ ವಿವರ

ಗಳನ್ನೆಲ್ಲ ಹೇಗೆ ಹೇಳಿದರು ?" ಎಂದನು ಒಂಟೆಯನ್ನು ಕಳೆದುಕೊಂಡವನು.

"ನಿಜ. ಈ ಪ್ರಶ್ನೆಗೆ ಏನು ಹೇಳುವಿರಿ ?" ಎಂದು ಬಾದಶಹನು ಅಣ್ಣ ತಮ್ಮಂದಿರನ್ನು ಕೇಳಿದನು.

"ನಾವು ನಮ್ಮ ಕಣ್ಣುಗಳನ್ನು ಉಪಯೋಗಿಸಿ, ಪ್ರತಿಯೊಂದನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅನೇಕ ವಿಷಯುಗಳನ್ನು ಹೇಳಬಲ್ಲೆವು ಪ್ರಭೂ" ಎಂದರು ಅಣ್ಣ ತಮ್ಮಂದಿರು.

"ನಿಮ್ಮ ವಿದ್ಯೆಯನ್ನು ನಾನು ಈಗಲೇ ಪರೀಕ್ಷಿಸಿಬಿಡುತ್ತೇನೆ" ಎಂದು ಹೇಳಿ ಬಾದಶಹನು ವಜೀರನ ಕಿವಿಯಲ್ಲಿ ರಹಸ್ಯವಾಗಿ ಏನೋ ಹೇಳಿದನು. ವಜೀರನು ಇಬ್ಬರು ನೌಕರರಿಂದ ಒಂದು ಪೆಟ್ಟಿಗೆಯನ್ನು ಹೊರಿಸಿ ತಂದು, ಬಾದಶಹನ ಇದಿರಿನಲ್ಲಿ ಇಡಿಸಿದನು.

"ಈ ಪೆಟ್ಟಿಗೆಯಲ್ಲಿ ಏನಿರುವುದೆಂದು ಹೇಳಿರಿ" ಎಂದು ಬಾದಶಹನು ಅಣ್ಣ ತಮ್ಮಂದಿರಿಗೆ ಆಜ್ಞೆ ಮಾಡಿದನು.

"ಅದು ಖಾಲೀ ಪೆಟ್ಟಿಗೆ. ಒಂದು ಗುಂಡಗಿನ ವಸ್ತು ಆ ಪೆಟ್ಟಿಗೆ ಯೊಳಗಿದೆ" ಎಂದನು ದೊಡ್ಡಣ್ಣ.

"ಆ ಗುಂಡಗಿನ ವಸ್ತು ದಾಳಿಂಬೇಕಾಯಿ" ಎಂದನು ಎರಡನೆಯವನು.

"ಕಾಯಿಯೇ ಹೌದು. ಇನ್ನೂ ಹಣ್ಣಾಗಲಿಲ್ಲ" ಎಂದನು ಮೂರನೆಯವನು.

ಬಾದಶಹನು ಆಸನದಿಂದ ಇಳಿದು ಬಂದು ಆ ಪೆಟ್ಟಿಗೆಯ ಮುಚ್ಚಳವನ್ನು ಎತ್ತಿ, ಅದರೊಳಗಿನಿಂದ ಒಂದು ದಾಳಿಂಬೆ ಕಾಯಿಯನ್ನು ಎತ್ತಿಕೊಂಡನು. ಸಭೆಯವರೆಲ್ಲಾ ನಿಬ್ಬೆರಗಾಗಿ ನೋಡುತ್ತಿದ್ದರು.

"ಇವರು ಕಳ್ಳರೂ ಅಲ್ಲ. ವಂಚಕರೂ ಅಲ್ಲ. ಮಹಾ ಮೇಧಾವಿಗಳೆನ್ನಲು ಏನೂ ಸಂದೇಹವಿಲ್ಲ. ನಿನ್ನ ಒಂಟೆ ಏನಾಯಿತೆಂಬುದನ್ನು ನೀನೇ ಹೋಗಿ




ಹುಡುಕಿಕೋ" ಎಂದು ಬಾದಶಹನು ಫಿರ್ಯಾದಿಯೊಂದಿಗೆ ಹೇಳಿ, ಅಣ್ಣ ತಮ್ಮಂದಿರನ್ನು ಆದರದಿಂದ ಮಾತಾಡಿಸಿದನು. ಅವರನ್ನು ತನ್ನ ಜತೆಯಲ್ಲೇ ಭೋಜನಕ್ಕೆ ಕರೆದೊಯ್ದು, ಅವರಿಗೆ ದಿವ್ಯವಾದ ಭೋಜನ ಪಾನೀಯಗಳನ್ನು ಕೊಡಿಸಿದನು.

"ನಿಮ್ಮ ಬುದ್ಧಿ ಸೂಕ್ಷ್ಮತೆ ಬಹಳ ಅದ್ಭುತವಾಗಿದೆ. ನೀವು ನೋಡದೇ ಇದ್ದ ಒಂಟೆಯನ್ನೂ, ಅದರ ಮೇಲೆ ಕುಳಿತವರನ್ನೂ ಹೇಗೆ ವರ್ಣಿಸಲು ಸಾಧ್ಯವಾಯಿತು ? ನನಗೆ ಹೇಳುವಿರಾ ?" ಎಂದು ಕೇಳಿದನು ಬಾದಶಹ.

"ದಾರಿಯಲ್ಲಿ ಒಂಟೆಯ ಪಾದದ ಗುರುತುಗಳಿದ್ದುವು. ಅವು ಸಣ್ಣ ಒಂಟೆಗಳಿಗಿಂತ ದೊಡ್ಡದಾಗಿದ್ದುವು. ಆದರಿಂದ ಒಂಟೆ ಬಹಳ ದೊಡ್ಡದೆಂದು ತಿಳಿಯಿತು" ಎಂದನು ದೊಡ್ಡವನು.

"ಅದು ದಾರಿಯಲ್ಲಿ ಹೋಗುತ್ತ ಬಲಬದಿಯಲ್ಲಿದ್ದ ಹುಲ್ಲು ಸೊಪ್ಪುಗಳನ್ನು ಮಾತ್ರ ಕಡಿದಿದೆ.

ಎಡ ಪಕ್ಕದಲ್ಲಿರುವುದಕ್ಕೆ ಬಾಯಿ ಹಾಕಲೇ ಇಲ್ಲ. ಆದ್ದರಿಂದ ಅದಕ್ಕೆ ಎಡದ ಕಣ್ಣು ಕುರುಡೆಂದು ಗೊತ್ತಾಯಿತು" ಎಂದನು ಎರಡನೆಯವನು.

ಒಂದು ಕಡೆಯಲ್ಲಿ ಆ ಒಂಟೆ ಮಲಗಿದೆ. ಅದರ ಮೇಲಿದ್ದವರು ಇಳಿದಿದ್ದಾರೆ. ಅಲ್ಲಿ ಹೊಯಿಗೆಯಲ್ಲಿ ಸ್ತ್ರೀಯ ಪಾದಗಳ ಗುರುತುಗಳೂ, ಮಗುವಿನ ಪಾದಗಳ ಗುರುತುಗಳೂ ಇದ್ದುವು. ಆದರಿಂದ ಹೆಂಗಸೂ, ಮಗುವೂ ಇದ್ದಾರೆಂದು ತಿಳಿದೆನು" ಎಂದನು ಮೂರನೇಯವನು.

"ನೀವು ಹೇಳಿದುದೆಲ್ಲಾ ಸರಿಯಾಗಿಯೇ ಇದೆ. ನಿಮ್ಮ ಪರಿಶೀಲನೆಯ ಶಕ್ತಿ ದೊಡ್ಡದೇ. ಆದರೆ ಪೆಟ್ಟಿಗೆಯಲ್ಲಿ ದಾಳಿಂಬೇಕಾಯಿ ಇರುವ ಸಂಗತಿ ಹೇಗೆ ಹೇಳಲು ಸಾಧ್ಯವಾಯಿತು? ಅದು ಮೊದಲಿನದರಷ್ಟು ಸುಲಭ ಅಲ್ಲವಷ್ಟೆ?" ಎಂದನು ಬಾದಶಹ.

"ಕೇಳಬೇಕು. ತಮ್ಮ ಸೇವಕರು ಪೆಟ್ಟಿಗೆಯನ್ನು ತರುವ ರೀತಿ ನೋಡಿದರೇನೇ ಅದು ಭಾರವಿಲ್ಲದ್ದೆಂದು ಗೊತ್ತಾಯಿತು. ಅವರು ಕೆಳಗೆ ಪೆಟ್ಟಿಗೆ ಇಡುವಾಗ ಒಂದು ಬದಿ ಮೊದಲು ನೆಲಕ್ಕೆ ಸೋಕಿ, ಅನಂತರ ಎರಡನೇ ಬದಿ ಸೋಕಿತು. ಆಗ ಆ ಪೆಟ್ಟಿಗೆಯೊಳಗೆ ಏನೋ ಒಂದು ವಸ್ತು ಉರುಳಿದಂತೆ ಶಬ್ದವಾಯಿತು. ಆದರಿಂದ ಖಾಲೀ ಪೆಟ್ಟಿಗೆಯಲ್ಲಿರುವ ಗುಂಡಗಿನ ವಸ್ತುವೇ ಆ ವಿಧವಾಗಿ ಉರುಳಿತೆಂದು ತಿಳಿದೆನು" ಎಂದನು ದೊಡ್ಡವನು.

"ಆ ಪೆಟ್ಟಿಗೆಯನ್ನು ನಿಮ್ಮ ದಾಳಿಂಬೇ ತೋಟದ ಕಡೆಯಿಂದಲೇ ತಂದರು. ಮನೆಯೊಳಗಿದ್ದ ಪೆಟ್ಟಿಗೆಯನ್ನು ದಾಳಿಂಬೇ ತೋಟಕ್ಕೆ ತೆಗೆದುಕೊಂಡು ಹೋದರೆಂದರೆ ದಾಳಿಂಬೇ ಕಾಯಿಯ ಹೊರತು ಬೇರೆ ಯಾವ ಗುಂಡಗಿನ ವಸ್ತು ಇದ್ದೀತು?" ಎಂದನು ಎರಡನೆಯವನು.

"ಇಲ್ಲಿಯವರೆಗೆ ಸರಿಯೇ. ಅದು ಹಸೀ ಕಾಯಿ ಎಂಬ ಸಂಗತಿ ಹೇಗೆ ಗೊತ್ತಾಯತು? ಹಣ್ಣೂ ಆಗಿರಬಾರದೇಕೆ?" ಎಂದು ಬಾದಶಹನು ಕೇಳಿದನು.

"ಅದನ್ನು ಹೇಳುವುದು ಬಹಳ ಸುಲಭ. ದಾಳಿಂಬೆ ಹಣ್ಣಾಗುವ ಕಾಲ ಇನ್ನೂ ಬರಲಿಲ್ಲ. ಹಣ್ಣಾದರೆ ಸಾಧಾರಣವಾಗಿ ಕೊಯ್ದು ಒಳಗಿಡುತ್ತಾರೆ. ತಾವು ಒಮ್ಮೆ ತೋಟದ ಕಡೆಗೆ ಕಣ್ಣೋಡಿಸಿದರೂ ಸಾಕು. ಎಲ್ಲವೂ ಕಾಯಿಗಳೇ" ಎಂದನು ಮೂರನೇಯವನು.

ಬಾದಶಹನು ಆ ಮೂವರು ಅಣ್ಣ ತಮ್ಮಂದಿರ ಬುದ್ಧಿ ಸೂಕ್ಷ್ಮತೆಗೆ ಸಂತೋಷಪಟ್ಟು, ಅವರನ್ನು ಒಳ್ಳೆಯ ಸಂಬಳದ ಮೇಲೆ ತನ್ನ ಆಸ್ಥಾನದಲ್ಲಿ ಇರಿಸಿಕೊಂಡನು.





# ಕೃತಘ್ನ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸಿ ಕೊಂಡಿದ್ದ ಕಾಲದಲ್ಲಿ ಒಬ್ಬ ಮಹಾಧನಿಕನಿದ್ದನು. ಅವನು ಒಂಬತ್ತು ಕೋಟಿ ನಾಣ್ಯಗಳನ್ನು ಪೂರ್ತಿ ಮಾಡಿ ಹೆಡೆಗಳನ್ನು ಎತ್ತುವ ಸಮಯಕ್ಕೆ ಒಬ್ಬ ಮಗನು ಹುಟ್ಟಿದನು. ಆದುದರಿಂದ ಮಗನಿಗೆ ಆ ಪ್ಯಾಯತೆಯಿಂದ ನವಕೋಟಿನಾರಾಯನೆಂದು ಹೆಸರಿಟ್ಟನು.

ನಾರಾಯನು ಬೆಳೆಯುತ್ತಾ ಬರುವಾಗ ಅವನ ತಂದೆ ಅವನಿಗೆ ಯಾವ ಕೊರತೆಯೂ ಇಲ್ಲದಂತೆ ಕೇಳಿದ್ದೆಲ್ಲಾ ಕೊಡುತ್ತಾ, ಇಷ್ಟಪ್ರಕಾರ ಮಾಡಲು ಬಿಡುತ್ತಾ ಬಂದನು. ಆದುದರಿಂದ ಹುಡುಗನು ಆಡಿದ್ದೇ ಆಟ ಹಾಡಿದ್ದೇ ಹಾಡು ಆಯಿತು. ಅವನು ದುಷ್ಟರೊಂದಿಗೂ ದುಂದುಗಾರರೊಂದಿಗೂ ಸಹವಾಸಕ್ಕಿಳಿದನು.

ಆಗ ತಂದೆ ಸ್ವಲ್ಪ ಎಚ್ಚರಕ್ಕೆ ಬಂದು ಮದುವೆ ಮಾಡಿದರೆ ಸರಿಹೋದಾನೆಂದು ಭಾವಿಸಿ, ಸುಂದರಿಯಾದ ಕನ್ಯೆಯೊಂದಿಗೆ ನಾರಾಯನಿಗೆ ಬಹಳ ವೈಭವದಿಂದ ಮದುವೆ ಮಾಡಿಸಿದನು. ಆಮೇಲೆ ಬಹು ಬೇಗದಲ್ಲೇ ತಂದೆ ತೀರಿಹೋದುದರಿಂದ ನಾರಾಯನಿಗೆ ಪೂರ್ತಿ ಸ್ವಾತಂತ್ರ್ಯದ ಅಧಿಕಾರ ಬಂದು ಕೇಳುವವರಿಲ್ಲದಾದನು. ತಂದೆಯ ಉದ್ದೇಶ ಈಡೇರಲೇ ಇಲ್ಲ.

ಚಿಕ್ಕಂದಿನಿಂದಲೇ ನಾರಾಯನು ಹದ್ದುಹಾಡಿಲ್ಲದೆ ಮಾಡಿದ ಸಾಲಗಳೆಲ್ಲಾ ತುಂಬಿ ಉಕ್ಕಿತೊಳಸಿ ಒರೆಸಿಕೊಂಡು ಹೋಗ ತೊಡಗಿತು. ತಂದೆ ಹೋದ ಕೂಡಲೇ ಸಾಲಗಳೆಲ್ಲ ಕಾಲಸರ್ಪಗಳ ಹಾಗೆ ಅವನನ್ನು ಸುತ್ತಿಕೊಂಡವು. ಈ ಸ್ಥಿತಿಯಲ್ಲಿ ನಾರಾಯನಿಗೆ ಜೀವನದ ಮೇಲೆಯೇ ನಿರಾಶೆಯುಂಟಾಯಿತು. ಗತ್ಯಂತರ ಕಾಣದೆ ಅವನು ಸಾಯುವುದೇ ಮೇಲೆಂದುಕೊಂಡು, ಸಾಲದವರೊಂದಿಗೆ, "ಅಯ್ಯಾ, ನಾನು ಗಂಗಾನದಿಯ ತೀರದಲ್ಲಿರುವ ನಾಗರಕಲ್ಲಿನ ಅರಳೀಮರದ ಬುಡದಲ್ಲಿರುತ್ತೇನೆ. ಅಲ್ಲಿ ನಮ್ಮ ಪೂರ್ವೀಕರು ಬಿಟ್ಟು ಹೋದ ನಿಧಿಯೊಂದಿದೆ. ನಿಮ್ಮ ಸಾಲದ ಪತ್ರಗಳನ್ನೆಲ್ಲಾ ತೆಗೆದುಕೊಂಡು ಅಲ್ಲಿಗೆ ಬನ್ನಿರಿ" ಎಂದು ಹೇಳಿದನು.

ನಿಜವೆಂದುಕೊಂಡು ಅವರೆಲ್ಲಾ ಆ ಅರಳೀಮರದ ಹತ್ತಿರ ಕಾದಿರ ತೊಡಗಿದರು. ನಾರಾಯನು ನಿಕ್ಷೇಪವನ್ನು ಹುಡುಕುವವನಂತೆ ಅತ್ತ ಇತ್ತ ಅಲೆದಾಡಿ,



ಅವರಿಗೆ ತಿಳಿಯದಂತೆ ಗಂಗಾನದಿಯಲ್ಲಿ ಧುಮುಕಿದನು. ಆಗ ಅವನು "ಜೈ ಪರಮೇಶ್ವರಾ!" ಎಂದು ದೀನನಾಗಿ ಕೂಗಿದುದರಿಂದ ಪ್ರವಾಹದ ವೇಗವು ಅವನನ್ನು ತೇಲಿಸಿಕೊಂಡು ಬಹು ದೂರದ ವರೆಗೆ ಎಳೆದೊಯ್ದು ತೀರಕ್ಕೆ ತಳ್ಳಿಬಿಟ್ಟಿತು.

ಆ ಕಾಲದಲ್ಲಿ ಬೋಧಿಸತ್ವನು ಒಂದು ಜಿಂಕೆಯಾಗಿ ಜನಿಸಿ, ಉಳಿದ ಜಿಂಕೆಗಳ ಮಂದೆಗಳಿಗೆ ದೂರದಲ್ಲಿ ಗಂಗೆಯ ತೀರದಲ್ಲಿ, ಪೊದರು ಬಳ್ಳಿಗಳು ಹೆಣೆದು ಕೊಂಡಿರುವ ಒಂದು ಮಾವಿನತೋಟದಲ್ಲಿ ತನ್ನ ನಿವಾಸ ಏರ್ಪಡಿಸಿಕೊಂಡಿದ್ದನು. ಈ ಜಿಂಕೆ ಎಲ್ಲಾ ವಿಧದಲ್ಲಿಯೂ ಉಳಿದ ಜಿಂಕೆಗಳಿಂದ ಪ್ರತ್ಯೇಕತೆ ಹೊಂದಿತ್ತು. ಅದರ ಶರೀರವೇ ಬಂಗಾರದ ಛಾಯೆ. ಅರಗಿನಂತಿರುವ ಗೊರಸುಗಳು, ಬೆಳ್ಳಿಯ ಕೊಂಬು ಗಳು. ಅಪೂರ್ವ ಸೌಂದರ್ಯ ಅದರದು.

ಒಂದು ದಿನ ಅರ್ಧರಾತ್ರಿಯ ಹೊತ್ತಿನಲ್ಲಿ ಯಾರೋ ವಿಪತ್ತಿನಲ್ಲಿ ಸಿಕ್ಕಿ ಆಕ್ರಂದನ ಮಾಡುವ ಶಬ್ದವು ಆ ಜಿಂಕೆಗೆ ಕೇಳಿಸಿತು. ಕೂಡಲೇ ಆ ಜಿಂಕೆಯ ಮನಸ್ಸು ಕರಗಿಹೋಯಿತು. "ಯಾರಿಗೇನಾಯಿತೋ ಪಾಪ!" ಎಂದುಕೊಂಡು ಆ ಬಂಗಾರದ ಜಿಂಕೆ ನೀರಿಗಿಳಿದು ಈಜುತ್ತಾ ಆಚೆಯ ತೀರಕ್ಕೆ ಹೋಯಿತು. ಅಲ್ಲಿ ರೋದಿಸಿಕೊಂಡಿದ್ದ ನಾರಾಯನನ್ನು ನೋಡಿತು.

"ನಾನಿರುವಾಗ ನಿನಗೇನೂ ಭಯವಿಲ್ಲ. ನದಿಗೆ ಬಿದ್ದು ಬದುಕಿ ಉಳಿದವನೆಂದು ಕಾಣುತ್ತೆ. ಬಾ. ಮೊದಲು ನನ್ನ ಮನೆಗೆ ಹೋಗೋಣ" ಎಂದು ಅವನಿಗೆ ಸಮಾಧಾನ ಹೇಳಿ, ತನ್ನ ಬೆನ್ನಿನ ಮೇಲೆ ಅವನನ್ನು ಕೂಡಿಸಿಕೊಂಡು ಈಜುತ್ತಾ ತನ್ನ ಬೀಡಾರಕ್ಕೆ ಹಿಂದಿರುಗಿತು. ಬಹಳ ಬಲಹೀನನಾಗಿದ್ದ ಅವನಿಗೆ ಪೂರ್ತಿಬಲ ಬರುವವರೆಗೂ ತನ್ನಲ್ಲೇ ಇರಿಸಿ ಕೊಂಡು, ಒಳ್ಳೊಳ್ಳೆಯ ಹಣ್ಣುಗಳನ್ನು ಅವನಿಗೆ ತಂದು ಕೊಟ್ಟಿತು.

ಹೀಗೆ ಅವನು ಸರಿಯಾದ ಸ್ಥಿತಿಗೆ ಬಂದ ಮೇಲೆ ಒಂದು ದಿನ ಆ ಜಿಂಕೆ ಅವನೊಂದಿಗೆ, "ಇನ್ನು ನಿನ್ನನ್ನು ಈ ಅರಣ್ಯದಿಂದ ದಾಟಿಸಿ, ನಿನ್ನ ರಾಜ್ಯಕ್ಕೆ ದಾರಿ ತೋರಿಸುತ್ತೇನೆ. ಕ್ಷೇಮವಾಗಿ ಮನೆ ಸೇರಿಕೋ. ನಾನು ಹೇಳುವ ಒಂದು ಮಾತು ಮಾತ್ರ ಮರೆಯ ಬೇಡ. ರಾಜನೇ ಆಗಲಿ, ಬೇರೆ ಯಾವ ಶ್ರೀಮಂತನೇ ಆಗಲಿ ನಿನ್ನನ್ನು ಎಷ್ಟೇ ಆಕರ್ಷಣೆ ಮಾಡಿದರೂ, ಇಂತಹ ಸ್ಥಳದಲ್ಲಿ ಬಂಗಾರದ ಜಿಂಕೆ ಇರುವುದೆಂಬ ನನ್ನ ಸಂಗತಿಯನ್ನು ಮಾತ್ರ ಹೇಳಬಾರದು. ಇದೇ ನನ್ನ ಬಯಕೆ" ಎಂದು ಹೇಳಿತು.

ನಾರಾಯನು ಸರಿಯೆಂದು ಒಪ್ಪಿದನು. ಈ ವಾಗ್ದಾನವನ್ನು ನಂಬಿ ಬಂಗಾರದ ಜಿಂಕೆ ಅವನನ್ನು ತನ್ನ ಬೆನ್ನಿನ ಮೇಲೆ ಏರಿಸಿಕೊಂಡು ಹೋಗಿ, ಕಾಶೀ ರಾಜ್ಯಕ್ಕೆ ಹೋಗುವ ಹೆದ್ದಾರಿಯಲ್ಲಿ ಬಿಟ್ಟು ಹಿಂದಿರುಗಿ ಹೋಯಿತು.

ಸರಿಯಾಗಿ ನಾರಾಯನು ಕಾಶೀಪಟ್ಟಣವನ್ನು ಸೇರುವ ದಿನದಲ್ಲಿ ಒಂದು ವಿಚಿತ್ರ ನಡೆಯಿತು. ಅದರ

ಮುಂಚಿನ ದಿನ ರಾತ್ರಿಯಲ್ಲಿ ಪಟ್ಟದರಾಣಿಯ ಕನಸಿನಲ್ಲಿ ಬಂಗಾರದ ಜಿಂಕೆಯೊಂದು ಕಂಡುಬಂದಿತ್ತು. ಅದು ಅವಳಿಗೆ ಧರ್ಮಬೋಧೆ ಮಾಡಿತಂತೆ. ರಾಣಿ ತನ್ನ ಗಂಡನ ಬಳಿಗೆ ಬಂದು, ಅದನ್ನು ಹೇಳಿ, "ಲೋಕದಲ್ಲಿ ಅಂತಹ ಜಿಂಕೆ ಇಲ್ಲದೆ ಹೋದರೆ ನನ್ನ ಕನಸಿನಲ್ಲಿ ಹೇಗೆ ಕಾಣಿಸಲು ಸಾಧ್ಯ? ಖಂಡಿತ ವಾಗಿಯೂ ಎಲ್ಲೋ ಇದೆ. ಅದನ್ನು ಹೇಗಾದರೂ ತರಿಸಿಕೊಡದಿದ್ದರೆ ನನ್ನ ಜೀವ ನಿಲ್ಲಲಿಕ್ಕಿಲ್ಲ" ಎಂದು ಹಟಹಿಡಿದಳು.

ಆ ಕೂಡಲೇ ರಾಜನು ಮಾಡಿದ ಏರ್ಪಾಡು ಏನಂದರೆ, ಒಂದು ಆನೆಯ ಮೇಲೆ ಅಂಬಾರಿಯನ್ನೂ, ಅಂಬಾರಿಯೊಳಗೆ ಸಾವಿರ ಬಂಗಾರದ ನಾಣ್ಯ ತುಂಬಿದ ಭರಣಿಯನ್ನೂ ಇರಿಸಲಾಯಿತು. ಅದು ಬೀದಿಗಳಲ್ಲಿ ಮೆರವಣಿಗೆ ಬರುತ್ತಿರುವಾಗ ಬಂಗಾರದ ಜಿಂಕೆಯ ಸಮಾಚಾರ ಯಾರು ಹೇಳಿ ಅದುಸಿಗುವ ಹಾಗೆ ಮಾಡುವರೋ, ಅವರಿಗೆ ಭರಣಿಯೊಳಗಿರುವ ಸಾವಿರ ನಾಣ್ಯಗಳನ್ನೂ ಕೊಡಲಾಗುವುದು.

ಈ ವಿಧವಾದ ಒಂದು ಪ್ರಕಟನೆಯನ್ನು ಸ್ವರ್ಣ ಪತ್ರದ ಮೇಲೆ ಲಿಖಿಸಿ, ಸೇನಾಧಿಪತಿ ಊರೊಳಗೆಲ್ಲಾ ಅದನ್ನು ಕುರಿತು ಡಂಗುರ ಸಾರಿಸಿದನು. ಆ ಡಂಗುರದ ಸಮಯದಲ್ಲೇ ನಾರಾಯನು ಕಾಶೀನಗರದೊಳಗೆ ಕಾಲಿಟ್ಟಿದ್ದನು. ಡಂಗುರ ಕೇಳಿದ ಕೂಡಲೇ ಅವನ ಬಾಯಿಯಲ್ಲಿ ಜೊಲ್ಲಿಳಿಯಿತು.

ಅವನು ಸೇನಾಧಿಪತಿಯ ಬಳಿಗೆ ಹೋಗಿ, "ಅಯ್ಯಾ, ನಿಮಗೆ ಬೇಕಾದ ಆ ಬಂಗಾರದ ಜಿಂಕೆ ಯನ್ನು ಕುರಿತು ನನಗೆ ಎಲ್ಲವೂ ಗೊತ್ತಿದೆ. ನನ್ನನ್ನು ಮಹಾರಾಜರ ಬಳಿಗೆ ಕರೆದುಕೊಂಡು ಹೋಗಿರಿ" ಎಂದನು.

ಆ ರೀತಿಯಾಗಿ ನಾರಾಯನು ರಾಜನನ್ನೂ, ಪರಿವಾರದವರನ್ನೂ ಕರೆದುಕೊಂಡು ಹೋಗಿ, ಬಂಗಾರದ ಜಿಂಕೆ ವಾಸಮಾಡುವ ಏಕಾಂತ ಸ್ಥಳ ವನ್ನು ಅವರಿಗೆ ತೋರಿಸಿ, ತಾನು ತುಸುದೂರದಲ್ಲೇ ನಿಂತನು. ತಪ್ಪು ಮಾಡಿದ ಅವನಿಗೆ ಜಿಂಕೆಯ ಮುಂದೆ ಬರಲು ಭಯ! "ಯಾರೋ ದೊಡ್ಡ



ಅತಿಥಿಗಳು ಬಂದ ಹಾಗಿದೆ. ಉತ್ತಮ ಸ್ವಾಗತ ಕೊಡಬೇಕಾದುದು ನನ್ನ ಧರ್ಮ" ಎಂದುಕೊಂಡು ಜಿಂಕೆಯ ರೂಪದ ಬೋಧಿಸತ್ವನು, ಪರಿವಾರವನ್ನೆಲ್ಲಾ ತಪ್ಪಿಸಿಕೊಂಡು ರಾಜನು ನಿಂತಿರುವಲ್ಲಿಗೆ ಹೋದನು.

ಆ ಜಿಂಕೆ ವೇಗವಾಗಿ ತನ್ನ ಬಳಿಗೆ ಬರುವುದನ್ನು ನೋಡಿ ರಾಜನು ಆಶ್ಚರ್ಯಪಟ್ಟನು. ಅವನು ಬಿಲ್ಲಿಗೆ ಅಂಬು ಹೂಡುವುದನ್ನು ನೋಡಿ ಜಿಂಕೆ, "ನಿಲ್ಲು ರಾಜಾ, ನಿಲ್ಲು. ದುಡುಕಬೇಡ. ನಾನಿರುವ ಸ್ಥಳವನ್ನು ನಿನಗೆ ಹೇಳಿದವರು ಯಾರು?" ಎಂದು ಪ್ರಶ್ನೆ ಮಾಡಿತು. ಜಿಂಕೆಯ ಮಾತುಗಳನ್ನು ಕೇಳಿ ರಾಜನು ಅತ್ಯಾನಂದದಿಂದ ಮೈಮರೆತನು. ಅವನ ಕೈಯಿಂದ ಬಿಲ್ಲಂಬುಗಳು ಜಾರಿ ಕೆಳಗೆ ಬಿದ್ದವು.

ಬೋಧಿಸತ್ವನು ಶಾಂತವಾದ ಮಧುರಕಂಠದಿಂದ, "ರಾಜಾ! ನಾನಿರುವ ಸ್ಥಳವನ್ನು ನಿನಗೆ ಹೇಳಿದವರು ಯಾರು?" ಎಂದು ಮತ್ತೆ ಪ್ರಶ್ನಿಸಿತು.

ರಾಜನು ನಾರಾಯನ ಕಡೆಗೆ ಬೆರಳು ತೋರಿಸಿದನು. ಆಗ ಬೋಧಿಸತ್ವನು, "ಲೋಕದಲ್ಲಿ ಮಾನವನನ್ನು ಮೀರಿಸುವ ಕೃತಘ್ನನಿಲ್ಲವೆಂದು ಶಾಸ್ತ್ರಗಳು ಹೇಳುವ ಮಾತು ನಿಜ. ಜಂತು ಭಾಷೆ ತಿಳಿದುಕೊಳ್ಳಬಹುದು, ಪಕ್ಷಿಗಳ ಭಾಷೆ ತಿಳಿದುಕೊಳ್ಳಬಹುದು. ಆದರೆ ಮನುಷ್ಯನ ಮಾತನ್ನು ಅರ್ಥಮಾಡಿಕೊಳ್ಳಲು ಬ್ರಹ್ಮನಿಗೂ ಸಾಧ್ಯವಿಲ್ಲ" ಎಂದು, ತಾನು ನಾರಾಯನನನ್ನು ರಕ್ಷಿಸಿ, ಅವನಿಂದ ಪಡೆದ ವಾಗ್ದಾನವನ್ನೆಲ್ಲಾ ವಿವರವಾಗಿ ರಾಜನೊಂದಿಗೆ ಹೇಳಿದನು.

ಅದನ್ನು ಕೇಳಿ ರಾಜನು ಕೋಪದಿಂದ, "ಹೀಗೋ ಸಮಾಚಾರ? ಇಂತಹ ಕೃತಘ್ನನು, ಮಹಾಪಾಪಿ, ಲೋಕಕ್ಕೊಂದು ಪೀಡೆ. ಒಂದೇ ಬಾಣದಿಂದ ಇವನನ್ನು ತೊಲಗಿಸಿ ಬಿಡುತ್ತೇನೆ" ಎಂದು ಬಿಲ್ಲು ಬಾಣಗಳನ್ನು ತೆಗೆದನು.

ಬೋಧಿಸತ್ವನು ಅವನನ್ನು ತಡೆದು, "ರಾಜಾ! ಕೊಲ್ಲಬಾರದು. ಬದುಕಿದ್ದರೆ ಎಂದಿಗಾದರೂ ಅವನಿಗೆ ಬುದ್ಧಿ ಬಂದು ಒಳ್ಳೆಯವನಾಗುತ್ತಾನೆ. ನೀನು ಮಾಡಿದ ವಾಗ್ದಾನದ ಪ್ರಕಾರ ಅವನಿಗೆ ಕೊಡಬೇಕಾದ ಬಹುಮಾನ ಧನವನ್ನು ಕೊಟ್ಟು ಬಿಡು. ಅದೇ ನ್ಯಾಯ" ಎಂದು ಹಿತಬೋಧೆ ಮಾಡಿದನು. ರಾಜನು ಹಾಗೆಯೇ ಮಾಡಿದನು.

ಬೋಧಿಸತ್ವನಾಗಿರುವ ಜಿಂಕೆಯ ಔದಾರ್ಯವನ್ನೂ, ಕ್ಷಮೆಯೇ ಮೊದಲಾದ ಮಹತ್ತರ ಗುಣಗಳನ್ನೂ ನೋಡಿ ರಾಜನು ಮುಗ್ಧನಾದನು. ಜಿಂಕೆಯಲ್ಲಿ ಮಹಾನುಭಾವನಾದ ಬೋಧಿಸತ್ವನನ್ನು ಗುರುತಿಸಿ, ಆ ಜಿಂಕೆಯನ್ನು ತನ್ನ ರಾಜ್ಯದ ರಥವನ್ನು ನಡೆಯಿಸುವ ಸಾರಥಿಯಂತೆ ಉಪಯೋಗಿಸಿಕೊಂಡಿದ್ದನು ಆ ರಾಜ.






# ಶ್ರೀ ಚೈತನ್ಯ ಪ್ರಭು

ಒರಿಸ್ಸಾ ಪ್ರಾಂತದಲ್ಲಿಯ ಜಯಪುರದಿಂದ, ನವದ್ವೀಪದ ಮಾಯಾಪುರಿಗೆ ಬಂದು ನೆಲೆನಿಂತ, ಮಿಶ್ರಾಪಂಡಿತ ಕುಟುಂಬವೆಂದರೆ ಸುತ್ತಮುತ್ತಲಿನವರಿಗೆಲ್ಲ ಅತ್ಯಂತ ಗೌರವಾದರಗಳಿದ್ದುವು. ೧೪೮೬ ನೆಯ ಇಸವಿ ಫೆಬ್ರುವರಿ ಹದಿನೆಂಟನೇ ತಾರೀಕಿನ ದಿನ ಜಗನ್ನಾಥ ಮಿಶ್ರಾ, ಶೋಚಿದೇವಿ ಎಂಬ ದಂಪತಿಗಳಿಗೆ ಒಬ್ಬ ಕುಮಾರನು ಹುಟ್ಟಿದನು.

ತಂದೆ ತಾಯಿಗಳು ಆ ಕುಮಾರನಿಗೆ ನಿಮಾಯ್ ಎಂದು ಹೆಸರಿಟ್ಟರು. ಆ ಮಗುವಿನ ಶರೀರ ಛಾಯೆ ಕಾಂತಿವಂತವಾಗಿದ್ದುದರಿಂದ ಅವನನ್ನು ಎಲ್ಲರೂ ಗೌರಾಂಗನೆಂತಲೂ ಕರೆಯುತ್ತಿದ್ದರು. ಓದುಬರೆಹಗಳಲ್ಲಿಯೂ, ಆಟಪಾಟಗಳಲ್ಲಿಯೂ ಜತೆಯ ಬಾಲಕರಿಗಿಂತ ಗೌರಾಂಗನು ಹೆಚ್ಚಿನ ಜಾಣನಾಗಿದ್ದನು.





ನಿಮಾಯ್ ಯುವಕನಾಗಿದ್ದಾಗಲೇ ಒಂದು ಸಂಸ್ಕೃತ ಶಾಲೆಯನ್ನು ಸ್ಥಾಪಿಸಿ ಅಲ್ಲಿ ಉಪಾಧ್ಯಾಯನಾದನು. ಅವನ ಪಾಂಡಿತ್ಯವೂ ದಯಾಗುಣವೂ ವಿದ್ಯಾರ್ಥಿಗಳನ್ನು ಬಹಳವಾಗಿ ಆಕರ್ಷಿಸಿದುವು. ಆದರೆ ಒಂದು ದಿನ ನಿಮಾಯ್ ಗಯೆಗೆ ಹೋಗಿ, ಈಶ್ವರ ಪೂರಿ ಎಂಬ ಸಾಧುಪುಂಗವನನ್ನು ದರ್ಶನ ಮಾಡಿ ಆತನ ಶಿಷ್ಯನಾದನು.



ನಿಮಾಯ್ ಮಾಯಾಪುರಿಗೆ ಹಿಂದಿರುಗಿ ಬಂದ ಮೇಲೆ ಸಂಸ್ಕೃತ ಪಾಠಶಾಲೆಯನ್ನು ಮುಚ್ಚಿಬಿಟ್ಟನು. ನಿರಂತರ ಧ್ಯಾನದಲ್ಲಿಯೂ, ಭಕ್ತಿ ಶ್ರದ್ಧೆಗಳಿಂದ ಶ್ರೀ ಕೃಷ್ಣ ಕೀರ್ತನೆಗಳನ್ನು ಗಾನ ಮಾಡುವುದರಲ್ಲಿಯೂ ಕಾಲಕಳೆಯುತ್ತಿದ್ದನು. ಬಹುಬೇಗದಲ್ಲೇ ಅವನಿಗೆ ಅನೇಕ ಮಂದಿ ಅನುಚರರು ಕೂಡಿದರು. ಅವರೆಲ್ಲ ಬೃಂದಗಳಾಗಿ ಸೇರಿ ಭಜನೆ ಕೀರ್ತನೆಗಳನ್ನು ಆಲಾಪಿಸುತ್ತ ಮೆರವಣಿಗೆ ಹೋಗಲು ಪ್ರಾರಂಭಿಸಿದರು.

ಕೆಲವು ಸಂಪ್ರದಾಯವಾದಿಗಳಿಗೆ ಈ ನೂತನ ಪದ್ಧತಿಯ ವೈಷ್ಣವ ಭಜನೆ ಹಿಡಿಸಲಿಲ್ಲ. ಆದುದರಿಂದ ಅವರು ಬಂಗಾಳದ ನವಾಬನ ಸ್ಥಾನಿಕ ಪ್ರತಿನಿಧಿಯಾದ ಕಾಜೀಯ ಬಳಿಗೆ ಹೋಗಿ ನಿಮಾಯ್ ಅನುಚರರು ಮಾಡುವ ಶ್ರೀ ಕೃಷ್ಣ ಕೀರ್ತನೆಗಳಿಗೆ ವ್ಯತಿರೇಕವಾಗಿ ಫಿರ್ಯಾದಿ ಮಾಡಿದರು.





ಅದನ್ನು ಕೇಳಿ ಕಾಜೀ, ಬೀದಿಯಲ್ಲಿ ಬೃಂದ ಗಾನ ಮಾಡುವುದನ್ನು ನಿಷೇಧಿಸಿ ಆಜ್ಞೆಯನ್ನು ಜ್ಯಾರೀ ಮಾಡಿದನು. ಆದರೆ ಅದನ್ನೇನೂ ಲಕ್ಷ್ಯಮಾಡದೆ ನವದ್ವೀಪದಲ್ಲಿರುವವರೆಲ್ಲರಿಗೂ ತನ್ನ ಭಜನೆಯಲ್ಲಿ ಪಾಲುಗೊಳ್ಳಬೇಕೆಂದು ನಿಮಾಯ್ ಕರೆಯನ್ನಿತ್ತನು. ಕೆಲವರು ಹೆದರಿ ಅದರ ದುಷ್ಪರಿಣಾಮವನ್ನು ಕುರಿತು ಅವನನ್ನು ಎಚ್ಚರಿಸಿದರು. ಆದರೆ ನಿಮಾಯ್ ಕಾಜೀಯ ಮೇಲೆ ಕೋಪವೇನೂ ತೋರ್ಪಡಿಸದೆ. ದೇವರ ಮೇಲಿನ ಅಚಂಚಲವಾದ ಭಕ್ತಿಶ್ರದ್ಧೆಗಳನ್ನು ಬಿಡಲಾರದೆ ಕಾಜೀಯ ನಿಷೇಧಾಜ್ಞೆಯನ್ನು ಅತಿಕ್ರಮಿಸಲಿಕ್ಕೇ ನಿಶ್ಚಯಿಸಿದನು.



ನೂರಾರು ಮಂದಿ ಭಕ್ತರು ನಿಮಾಯಿಯ ಸುತ್ತಲೂ ಸೇರಿದರು. ಶ್ರೀ ಕೃಷ್ಣ ಲೀಲೆಗಳನ್ನು ಅಭಿವರ್ಣಿಸುವ ಭಕ್ತಿಗೀತೆಗಳನ್ನು ಬಾಯಿತುಂಬಾ ಹಾಡುತ್ತ, ಭಜನೆಯ ವೃಂದ ಹೊರಟಿತು ಹೋಗ ಹೋಗುತ್ತ ಭಕ್ತರ ಸಂಖ್ಯೆ ಬೆಳೆದು ಬೆಳೆದು ಪ್ರಜಾಸಮುದ್ರದ ಹಾಗೆ ಕಾಣಿಸಿತು. ಆ ಭಜನೆಯ ಬೃಂದವು ಕಾಜೀಯ ಗೃಹದ ಮುಂದೆ ಬರುತ್ತಿರಲು, ಅದನ್ನು ನೋಡಿ ಕಾಜೀ ಭಕ್ತಿಪೂರ್ವಕವಾಗಿ ನಿಮಾಯಿಗೆ ನಮಸ್ಕಾರ ಮಾಡಿದನು.

ಒಂದು ಸಾರಿ ನಿಮಾಯಿಯ ಪ್ರಥಮ ಶಿಷ್ಯನಾದ ನಿತ್ಯಾನಂದನ ಮೇಲೆ ಜಗಾಯ್, ಮಧಾಯ್ ಎಂಬ ಇಬ್ಬರು ದುಷ್ಟರು ಕೈ ಮಾಡಿದರು. ಮಧುಪಾತ್ರವನ್ನು ಅವನ ಮುಖದ ಮೇಲೆ ಬಿಸುಟರು. ನಿತ್ಯಾನಂದನ ಶರೀರದಿಂದ ರಕ್ತ ಸುರಿಯ ತೊಡಗಿತು. ಆದರೂ ಅವನು ಸ್ವಲ್ಪವೂ ಕೋಪ ತೋರಿಸದೆ ಕೃಷ್ಣನ ನಾಮಾವಳಿಯನ್ನು ಹೇಳಿರೆನ್ನುತ್ತ, ಅವರಿಗೆ ಬೋಧನೆ ಮಾಡ ತೊಡಗಿದನು. ಇಷ್ಟರಲ್ಲಿ ಅಲ್ಲಿಗೆ ನಿಮಾಯ್ ಬಂದುದರಿಂದ ಆ ದುಷ್ಟರು ಅವನ ಪಾದಗಳ ಮೇಲೆ ಬಿದ್ದು ನಮಸ್ಕಾರ ಮಾಡಿದರು.





ನಿಮಾಯಿಗೆ ವಿಷ್ಣುಪ್ರಿಯಳೊಂದಿಗೆ ವಿವಾಹ ವಾಯಿತು. ಕೆಲವು ದಿನಗಳವರೆಗೆ ಅವನು ಮಾಮೂಲು ಜೀವಿತವನ್ನು ಕಳೆಯುತ್ತಿದ್ದು, ಇನ್ನು ಮೇಲೆ ನೂತನ ಜೀವಿತಕ್ಕೆ ಸಮಯ ಬಂತೆಂದುಕೊಂಡನು. ಒಂದು ದಿನ ರಾತ್ರಿ ಮನೆ ಯನ್ನು ಬಿಟ್ಟು, ಸುಪ್ರಸಿದ್ಧನಾದ ಕೇಶವಭಾರತಿ ಯನ್ನು ದರ್ಶನಮಾಡಿ, ಸನ್ಯಾಸವನ್ನು ಸ್ವೀಕರಿಸಿ ದನು. ಅಂದಿನಿಂದ ಅವನು ಕೃಷ್ಣಚೈತನ್ಯನೆಂದು ಹೆಸರು ಪಡೆದನು.

ವಿಶ್ವಾಸಪಾತ್ರರಾದ ಅನುಚರರೊಂದಿಗೆ ಅವನು ಪವಿತ್ರವಾದ ಪೂರೀ ನಗರಕ್ಕೆ ಪ್ರಯಾಣ ಮಾಡಿದನು. ದೂರದಿಂದ ಪೂರಿಕ್ಷೇತ್ರವನ್ನು ದರ್ಶಿಸಿದ ಕೂಡಲೇ ಅವನು ಭಕ್ತಿ ಆನಂದಗಳಿಂದ ತನ್ಮಯನಾದನು. ಅಲ್ಲಿರುವ ಕವಿಗಳ, ಪಂಡಿತರ, ಸಾಧುಗಳ ಸಾನ್ನಿಧ್ಯದಲ್ಲಿ ಅಲ್ಲಿಯೇ ಸ್ಥಿರಪಡಬೇಕೆಂದು ನಿಶ್ಚಯಿಸಿಕೊಂಡನು.





ಕೃಷ್ಣನಿವಾಸ ಸ್ಥಾನವೆಂದು ಪುರಾಣ ಪ್ರಸಿದ್ಧವಾದ ಬೃಂದಾವನಕ್ಕೆ ಚೈತನ್ಯನು ಯಾತ್ರೆ ಮಾಡಿದನು. ಅಲ್ಲಿ ಶ್ರೀ ಕೃಷ್ಣನ ಲೀಲೆಗಳೊಂದಿಗೆ ಸಂಬಂಧಪಟ್ಟ ಸ್ಥಲಗಳನ್ನು ಗುರುತಿಸಿ ಮೈಮರೆತನು. ಆತನ ಅಭೀಷ್ಟದಂತೆ ಆ ಪ್ರದೇಶಗಳಲ್ಲಿ ನೂತನ ಆಲಯಗಳು ನಿರ್ಮಿಸಲ್ಪಟ್ಟವು. ಪ್ರಾಚೀನವಾದ ಆಲಯಗಳನ್ನು ಪುನರುದ್ಧಾರ ಮಾಡಲಾಯಿತು.

ಕೃಷ್ಣಚೈತನ್ಯನು ಪೂರೀಗೆ ಹಿಂದಿರುಗಿ ಬಂದಾಗ ಒರಿಸ್ಸಾದ ರಾಜಪ್ರತಾಪರುದ್ರನೂ, ಮಂತ್ರಿ ರಾಮಾನಂದರಾಯ್ ಕೂಡಾ ಭಕ್ತಿಗೌರವಗಳಿಂದ ಅವನನ್ನು ಸ್ವಾಗತ ಮಾಡಿಕೊಂಡರು. ಇಸವಿ ೧೫೩೩ ನೇ ವರ್ಷದಲ್ಲಿ ಆತನು ಎಲ್ಲಿಗೋ ಅಜ್ಞಾತವಾಗಿ ಹೊರಟು ಹೋದನು. ಆದರೆ ಅವನು ನಡೆಯಿಸಿದ ವೈಷ್ಣವೋದ್ಯಮವು ಮಾತ್ರ ಪೂರ್ವ ಭಾರತ ದೇಶವನ್ನು ಪ್ರತ್ಯಕ್ಷವಾಗಿಯೂ, ಉಳಿದ ಪ್ರಾಂತಗಳನ್ನು ಪರೋಕ್ಷವಾಗಿಯೂ ಪ್ರಭಾವಿತಗೊಳಿಸಿರುತ್ತದೆ.






# ಸಲಹೆಯ ಸಂಸಾರ

ಹರಿಪುರವೆಂಬ ಊರಿನಲ್ಲಿ ಧನರಾಜನೆಂಬೊಬ್ಬನು ಗುಣಮಣಿ ಎಂಬವಳನ್ನು ವಿವಾಹ ಮಾಡಿಕೊಂಡನು. ಧನರಾಜನು ತಂದೆ ತಾಯಿಗಳ ಏಕೈಕ ಪುತ್ರನಾದುದರಿಂದ ಬಹಳ ಅಚ್ಚೆಯಿಂದ ಬೆಳೆಸಲ್ಪಟ್ಟವನು. ತಾಯಿ ತಂದೆಯರ ಮೇಲೆ ಅವನಿಗೆ ತುಂಬಾ ಭಯ ಭಕ್ತಿ. ಅವರು ಹೇಳಿದ ಹಾಗೆ ಕೇಳುವನು.

ಮದುವೆಯಾಗಿ ಹೆಂಡತಿ ಮನೆಗೆ ಬಂದ ಮೇಲೆ ಕೆಲವು ತಿಂಗಳಲ್ಲಿ ಗುಣಮಣಿಗೆ ಸೀರೆ ಕೊಂಡುಕೊಳ್ಳಬೇಕಾಗಿ ಬಂತು. ಈ ವಿಷಯವನ್ನು ಅವಳು ಗಂಡನ್ನೊಂದಿಗೆ ಹೇಳಿದಳು. ಯಾವ ಸೀರೆಯೋ, ತರಬೇಕೋ ಬೇಡವೋ ಎಂಬುದು ಅವನಿಗೆ ಗೊತ್ತಾಗಲಿಲ್ಲ.

"ಯಾವ ನಮೂನೆಯ ಸೀರೆ ತೆಗೆದುಕೊಂಡು ಬರಬೇಕೆಂದು ಅಮ್ಮನನ್ನು ಕೇಳಿ, ಆಮೇಲೆ ಹೋಗಿ ತರುತ್ತೇನೆ" ಎಂದನು ಧನರಾಜ.

ಅದರಂತೆ ಮರುದಿನ ಅವನ ತಾಯಿ ವೇಣಮ್ಮನ ಸಲಹೆಯ ಪ್ರಕಾರ ಧನರಾಜನು ನಾಲ್ಕು ನಿತ್ಯವುಡುವ ಸೀರೆಗಳನ್ನು ಕೊಂಡುಕೊಂಡು ತಂದು ತಾಯಿಗೆ ತೋರಿಸಿದನು. ವೇಣಮ್ಮ ಸರಿಯಿದೆ ಎಂದ ಮೇಲೆ ಹೆಂಡತಿಗೆ ಕೊಟ್ಟನು.

ಮುಂದೆ ಒಂದು ವಾರ ಕಳೆಯುವಷ್ಟರಲ್ಲಿ ನೆರೆಯ ಊರಿನಲ್ಲಿದ್ದ ಧನರಾಜನ ಸ್ನೇಹಿತನೊಬ್ಬನು ಮದುವೆ ಮಾಡಿಕೊಳ್ಳುವನೆಂಬ ಸಮಾಚಾರ ಗೊತ್ತಾಯಿತು. ಗುಣಮಣಿ ಧನರಾಜನೊಂದಿಗೆ, ನಿಮ್ಮ ಸ್ನೇಹಿತನಿಗೆ ಏನಾದರೂ ಬಹುಮಾನ ತೆಗೆದುಕೊಂಡು ಹೋಗಿ ಕೊಡುವುದು ಚೆನ್ನಾಗಿರುತ್ತದೆಂದು ಸೂಚಿಸಿದಳು.

"ಅಪ್ಪನನ್ನು ಕೇಳಿ ನೋಡುತ್ತೇನೆ. ಅವರು ಯಾವುದು ಬಹುಮಾನ ತೆಗೆದುಕೊಳ್ಳಬೇಕೆಂದು ಹೇಳುವರೋ ಅದನ್ನು ತೆಗೆದುಕೊಂಡು ಹೋಗಿ ಕೊಟ್ಟು ಬರುತ್ತೇನೆ. ಅದುವೇ ನ್ಯಾಯ" ಎಂದನು ಧನರಾಜ.

ತನ್ನ ಗಂಡನ ಈ ಪರಾವಲಂಬನೆಯ ರೀತಿ ಗುಣಮಣಿಗೆ ಹೇಗೋ ಅನಿಸಿತು. ಮಗನಿಗಿರುವ ತಂದೆತಾಯಿಗಳ ಮೇಲಿನ ಭಕ್ತಿಶ್ರದ್ಧೆಯನ್ನು ತಪ್ಪೆಂದು ಖಂಡಿಸಲು ಅವಳಿಂದಾಗದೆ ಹೋಯಿತು. ಆದರೂ ಭಕ್ತಿಶ್ರದ್ಧೆಗಳಿಗೆ ಒಂದು ಮಿತಿ ಬೇಡವೆ? ಎಂದು ತನ್ನೊಳಗೆ ಅಂದುಕೊಂಡಳು.

ಧನರಾಜನು ಸ್ನೇಹಿತನ ಮದುವೆಗೆ ಹೋಗಿ ಬಂದ ಮೇಲೆ, ಒಂದು ದಿನ ಗುಣಮಣಿ

ಎಸ್. ಎನ್. ಮೂರ್ತಿ




ಅವನೊಂದಿಗೆ "ನನ್ನ ಅಮ್ಮನನ್ನು ಅಪ್ಪನನ್ನು ನೋಡಿ ಬಹಳ ಕಾಲವಾಯಿತು. ಒಂದುಸಾರಿ ತೌರು ಮನೆಗೆ ಹೋಗಿ ಬರಬೇಕೆಂದು ಆಸೆಯಾಗಿದೆ" ಎಂದಳು.

"ಈ ಸಂಗತಿ ಅಮ್ಮನ ಹತ್ತಿರ ಕೇಳಿ ಹೇಳುತ್ತೇನೆ. ಯಾವಾಗ ಹೋಗಬಹುದೆನ್ನುವಳೋ, ಅಲ್ಲಿ ಎಷ್ಟು ದಿನ ಇರಬೇಕೆನ್ನುವಳೋ, ಯಾವಾಗ ಹಿಂದಿರುಗಿ ಬರಲು ಹೇಳುವಳೋ ಕೇಳಿ ಹೇಳುತ್ತೇನೆ" ಎಂದನು ಧನರಾಜ.

ಆದರಂತೆ ತಾಯಿಯ ಸಲಹೆಯ ಪ್ರಕಾರವೇ ಗುಣಮಣಿಯನ್ನು ಅವಳ ತೌರಿಗೆ ಕಳುಹಿಸಿ ಕೊಟ್ಟನು. ಕೆಲವು ದಿನಗಳ ಮೇಲೆ ಅವಳನ್ನು ಅವಳ ಅಣ್ಣ ಆನಂದನೇ ಹಿಂದಿರುಗಿ ಕರೆದುಕೊಂಡು ಬಂದನು. ಅವನನ್ನು ಕೂಡಲೇ ಹಿಂದಿರುಗಲು ಬಿಡದೆ, ಎರಡು ದಿನ ಇರುವಂತೆ ಆ ಮನೆಯವರು ಹೇಳಿ ಉಪಚರಿಸಿದರು.

ಒಂದು ದಿನ ಆನಂದನೂ, ಧನರಾಜನ ತಂದೆ ರಾಮನಾಥನೂ ಜಗಲಿಯಲ್ಲಿ ಕುಳಿತುಕೊಂಡು ಮಾತಾಡಿಕೊಂಡಿರುವಾಗ, ಧನರಾಜನು ಅಲ್ಲಿಗೆ ಬಂದು, "ಅಪ್ಪ, ನಾನು ಸ್ವಲ್ಪ ಅಂಗಡಿ ಬೀದಿಗೆ ಹೋಗಿಬರಲೆ? ಸಾಬೂನು ಬೇಕಂತೆ, ಯಾವ ಸಾಬೂನು ತರಲಿ?" ಎಂದನು.

"ಹಾಗೆಯೇ ಹೋಗಿ ಬಾ, ಈ ಮೊದಲು ತಂದದ್ದೇ ಸಾಬೂನು ತೆಗೆದುಕೊ" ಎಂದನು ರಾಮನಾಥ.

"ಅಲ್ಲ ಮಾವಯ್ಯಾ, ನಿಮ್ಮ ಸಲಹೆ ಅತ್ತೆಯ ಸಲಹೆ ತೆಗೆದುಕೊಳ್ಳದೆ ಬಾವ ಒಂದು ಸಣ್ಣ ಕೆಲಸ ಕೂಡಾ ಮಾಡುವುದಿಲ್ಲಾಂತ ಕಾಣುತ್ತದೆ" ಎಂದನು ಆನಂದ ಮುಗುಳು ನಗುತ್ತ. ರಾಮನಾಥನಿಗೆ ಸ್ವಲ್ಪ ಬಿಸಿತಾಗಿದಂತಾಯಿತು.

"ಹೌದು. ನಾವು ಅವನನ್ನು ಹಾಗೆ ಬೆಳೆಸಿದ್ದೇವೆ" ಎಂದು ರಾಮನಾಥನು ಸ್ವಲ್ಪ ಹೊತ್ತು ಸುಮ್ಮನಿದ್ದು, "ಮತ್ತೆ ನೀನೂ ಗುಣಮಣಿಯೂ ಹೇಗೆ ಬೆಳೆದು ದೊಡ್ಡವರಾದಿರಿ? ತಂದೆ ತಾಯಿಗಳು ಹೇಳಿದಂತೆ ಕೇಳಿತಾನೆ?" ಎಂದು ಕೇಳಿದನು.

"ನಾವು ಚಿಕ್ಕಂದಿನಲ್ಲಿ ಹಾಗಿದ್ದವೆನ್ನಿ, ಇತ್ತೀಚೆಗೆ ಮಾತ್ರ ಬೆಳೆದ ರೀತಿ ಬೇರೆಯೇ. ಪ್ರತಿ ಸಣ್ಣಪುಟ್ಟ ವಿಷಯಕ್ಕೆಲ್ಲ ಅಮ್ಮ ಅಪ್ಪಂದಿರನ್ನು ಕೇಳುವುದೇ ಇಲ್ಲ. ಅದಕ್ಕೆ ಅವರು ಆಕ್ಷೇಪಿಸುವುದೂ ಇಲ್ಲ" ಎಂದನು ಆನಂದ.

ಆನಂದನು ಅಲ್ಲಿ ಎರಡು ದಿನಗಳ ವರೆಗೆ ಇದ್ದು ಹೊರಟುಹೋದನು. ಆಮೇಲೆ ರಾಮನಾಥನು ತನ್ನ ಮಗನೊಂದಿಗೆ, "ಧನರಾಜಾ, ನಾನೂ ನಿನ್ನಮ್ಮನೂ ಒಂದು ತಿಂಗಳ ವರೆಗೆ ದಕ್ಷಿಣದೇಶಕ್ಕೆ ಕ್ಷೇತ್ರಾಟನೆಗೆ ಹೋಗಿ ಬರಬೇಕೆಂದಿದ್ದೇವೆ. ನಾಳೆಯೇ ನಮ್ಮ ಪ್ರಯಾಣ" ಎಂದನು.

ಈ ಮಾತು ಕೇಳಿದ ಕೂಡಲೇ ಧನರಾಜನು ಬೆಪ್ಪು ಬೆರಗಾಗಿ, "ಒಂದು ತಿಂಗಳೇ! ಅಷ್ಟರ ವರೆಗೆ ಮನೆ




ಹೊಲ ತೋಟಗಳನ್ನೆಲ್ಲ ಯಾರ ಸಲಹೆ ಕೇಳಿ ನೋಡಿಕೊಳ್ಳಲಿ ?" ಎಂದನು.

"ನಿನ್ನ ಸಲಹೇನೇ ಕೇಳಿಕೊಂಡು ಮಾಡಿಕೋ" ಎಂದಷ್ಟೇ ಹೇಳಿದನು ರಾಮನಾಥ, ಮರುದಿನ ರಾಮನಾಥನು ಹೆಂಡತಿಯೊಂದಿಗೆ ತೀರ್ಥಯಾತ್ರೆಗೆ ಹೊರಟುಹೋದನು.

ಆಮೇಲೆ ನಾಲ್ಕನೇ ದಿನ ಧನರಾಜನ ಸ್ನೇಹಿತನಾದ ಗೋಪಾಲನು ಅವನ ಹತ್ತಿರ ಬಂದು, ಅತ್ಯಗತ್ಯ ಬಂದುದರಿಂದ ಸಾವಿರ ರೂಪಾಯಿ ಸಾಲಬೇಕೆಂದು ಕೇಳಿದನು.

ಧನರಾಜನು ಗುಣಮಣಿಯ ಹತ್ತಿರ ಹೋಗಿ, "ಈಗ ಏನು ಮಾಡಲೆಂದು ಗೊತ್ತಾಗುವುದಿಲ್ಲ. ಸಲಹೆ ಕೇಳೋಣವೆಂದರೆ ಅಪ್ಪ ಇಲ್ಲ. ಗೋಪಾಲನು ಸಾವಿರ ರೂಪಾಯಿ ಕೇಳುತ್ತಾನಲ್ಲ ?" ಎಂದನು.

"ಸಾಲ ಕೊಟ್ಟರೆ ನಿಮ್ಮ ಸ್ನೇಹಿತರು ತೀರಿಸಲು ಸಾಧ್ಯವೇ ? ಸಾಧ್ಯಇಲ್ಲವೇ ? ಅವರ ಸ್ಥಿತಿಗತಿ ಎಂತಹುದು ? ಈ ಸಂಗತಿ ನೀವೇ ಆಲೋಚಿಸ ಬೇಕು. ಇದರಲ್ಲಿ ಮಾವಯ್ಯನ ಸಲಹೆಯೋ ನನ್ನ ಸಲಹೆಯೋ ಏತಕ್ಕೆ ?" ಎಂದಳು ಗುಣಮಣಿ.

ಧನರಾಜನು ಗೋಪಾಲನೊಂದಿಗೆ ತನ್ನ ಮನೆ ಜವಾದ್ದಾರಿಯ ಖರ್ಚು ವೆಚ್ಚಗಳನ್ನು ಹೇಳಿ, ತನ್ನ ಹಣದ ಮುಗ್ಗಟ್ಟನ್ನು ತಿಳಿಸಿ, ಸ್ನೇಹಿತನನ್ನು ಉಪಾಯದಿಂದ ಕಳುಹಿಸಿಬಿಟ್ಟನು.

ಮತ್ತೆ ನಾಲ್ಕು ದಿನಗಳಲ್ಲಿ ಒಕ್ಕಲಿಗ ಸುಬ್ಬನು ಧನರಾಜನ ಬಳಿಗೆ ಬಂದು, "ಈಸಾರಿ ಕಬ್ಬಿನ ಪೈರು ಎಷ್ಟು ಗದ್ದೆಗಳಲ್ಲಿ ಹಾಕಬೇಕೆನ್ನುವಿರಿ ?" ಎಂದು ಕೇಳಿದನು.

ಧನರಾಜನು ಹೆಂಡತಿಯ ಹತ್ತಿರ ಹೋಗಿ, ಸುಬ್ಬನ ಪ್ರಶ್ನೆಯನ್ನು ಹೇಳಿ, "ಅಪ್ಪ ಇರುತ್ತಿದ್ದರೆ ಕೇಳಿ ಹೇಳುತ್ತಿದ್ದೆ. ಈಗ ಏನೆಂದು ಅವನಿಗೆ ಹೇಳಲಿ ?" ಎಂದನು.

"ಅದರಲ್ಲಿ ಏನಿದೇರೀ ? ಈ ಮೊದಲು ಹಾಕಿದ ಗದ್ದೆಯಲ್ಲಿ ಹಾಕಬಾರದು. ಪಕ್ಕದ ಗದ್ದೆಗಳಲ್ಲಿ ಹಾಕಿದರಾಯಿತು. ವರ್ಷಾ ವರ್ಷಾ ಹೀಗೆ ತಾನೇ ಮಾಡುತ್ತಾರೆ ?" ಎಂದಳು ಗುಣಮಣಿ.

ಧನರಾಜನು ಆಲೋಚನೆ ಮಾಡಿ, ಯಾವ ಗದ್ದೆ ಗಳಲ್ಲಿ ಬತ್ತ, ಯಾವ ಗದ್ದೆಗಳಲ್ಲಿ ಕಬ್ಬು ಬೆಳೆಯಿಸ ಬೇಕೆಂಬುದನ್ನು ಸುಬ್ಬನಿಗೆ ವಿವರಿಸಿ ಹೇಳಿದನು. ಆಮೇಲೆ, ಮನೆಗೆಲಸ ಮತ್ತು ಇತರ ಕಾರ್ಯಗಳನ್ನು ಕುರಿತು ಧನರಾಜನು ಕೇಳಿದಾಗಲೆಲ್ಲಾ ಗುಣಮಣಿ, "ಅದೆಲ್ಲಾ ನಿಮಗೇ ಗೊತ್ತಿದೆ. ನಡುವೆ ನನ್ನ ಸಲಹೆ ಏಕೆ ?" ಎಂದು ಹೇಳಲು ಪ್ರಾರಂಭಿಸಿದಳು.

ಇಷ್ಟರಲ್ಲಿ ತಂದೆ ರಾಮನಾಥನಿಂದ ಧನರಾಜನಿಗೆ ತಾವು ಇನ್ನೂ ಕೆಲವು ಕ್ಷೇತ್ರಗಳನ್ನು ನೋಡಿಕೊಂಡು, ಇನ್ನೆರಡು ತಿಂಗಳ ಮೇಲೆ ಬರುತ್ತೇವೆಂದು ಸಮಾಚಾರ ಬಂದಿತು. ಈ ವಿಧವಾಗಿ ಧನರಾಜನು ತನ್ನ ಸ್ವಂತ ನಿರ್ಣಯಗಳಿಂದಲೇ ಎಲ್ಲಾ ಕೆಲಸಗಳನ್ನೂ, ಬಾಧ್ಯತೆ

ಗಳನ್ನೂ ನಿಭಾಯಿಸಲೇ ಬೇಕಾಯಿತು. ಎಲ್ಲವೂ ತಪ್ಪಿಲ್ಲದೆ ಸರಿಯಾಗಿಯೇ ನಡೆಯುತ್ತಿತ್ತು. ಮೂರು ತಿಂಗಳ ಮೇಲೆ ಅವನ ತಂದೆ ತಾಯಿಯರು ಯಾತ್ರೆ ಮುಗಿಸಿ ಮನೆಗೆ ಹಿಂದಿರುದರು.

ಈ ಸಂಗತಿಯನ್ನು ತಿಳಿದು ಗುಣಮಣಿಯ ಅಣ್ಣ ಆನಂದನು, ಅವರನ್ನು ನೋಡಿ ಮಾತಾಡಿಸಿ ಹೋಗಲು ಬಂದನು.

ಅವನೂ, ರಾಮನಾಥನೂ, ಧನರಾಜನೂ ಬಾಗಿಲ ಹತ್ತಿರ ನಿಂತುಕೊಂಡು ಹೊಲಗದ್ದೆಗಳ ಸಂಗತಿಯನ್ನು ಕುರಿತು ಮಾತಾಡಿಕೊಂಡಿರುವಾಗ, ಪೂಜಾರಿ ಭರಮಯ್ಯ ಕೆಲವು ಜನರೊಂದಿಗೆ ಅಲ್ಲಿಗೆ ಬಂದು, "ಅಯ್ಯಾ, ಅಮ್ಮನವರ ಜಾತ್ರೆ ಬಂತಪ್ಪೇ ? ತಮ್ಮ ಕಾಣಿಕೆ ದಯಮಾಡಿಸಬೇಕು " ಎಂದನು.

ರಾಮನಾಥನು ಏನೋ ಹೇಳುವುದಕ್ಕೆ ಮೊದಲೇ ಧನರಾಜನು ಭರಮನನ್ನು ನೋಡಿ, "ಹಾಗೆಯೇ ಕೊಡುತ್ತೇವೆ. ನಿಮ್ಮ ಮೇಳದವರೂ, ಗರಡೀ ಮಲ್ಲರೂ, ನಮ್ಮ ಮನೇ ಮುಂದೆ ಕಡೇಪಕ್ಷ ಅರ್ಧ ಗಂಟೆ ನಿಂತು ಆಡಬೇಕು" ಎಂದು ಹೇಳಿ ಮನೆ ಯೊಳಗೆ ಹೋಗಿ, ಸ್ವಲ್ಪ ಹಣ ತಂದು ಭರಮಯ್ಯನಿಗೆ ಕೊಟ್ಟನು.

ಇದನ್ನು ನೋಡಿ ರಾಮನಾಥನು ಬಹಳ ಸಂತೋಷಪಟ್ಟನು. ತನ್ನ ಬಾವಯ್ಯನಲ್ಲಿ ಬಂದಿರುವ ಈ ದೊಡ್ಡ ಮಾರ್ಪಾಡನ್ನು ನೋಡಿ, ಆನಂದನಿಗೂ ಆಶ್ಚರ್ಯವಾಯಿತು. ಅಷ್ಟರಲ್ಲಿ ಒಕ್ಕಲಿಗ ಸುಬ್ಬಯ್ಯ ಬರುವುದನ್ನು ನೋಡಿ ಅವನೊಡನೆ ಮಾತಾಡಲು ಧನರಾಜನು ಆ ಕಡೆಗೆ ಹೋದನು.

ತನ್ನ ಮಗನ ಕಡೆಗೆ ಆಶ್ಚರ್ಯದಿಂದ ನೋಡು ತ್ತಿರುವ ಆನಂದನನ್ನು ನೋಡಿ ರಾಮನಾಥನು, "ಆ ದಿನ ನಿನ್ನೊಂದಿಗೆ ಮಾತಾಡಿದ ಮೇಲೆ ಬೇಕೆಂತಲೇ ನಾವಿಬ್ಬರೂ ತೀರ್ಥಯಾತ್ರೆಗೆ ಹೊರಟೆವು. ಈ ಬೆಳೆದ ವಯಸ್ಸಿನಲ್ಲಿ ನಮ್ಮವನು ಚಿಕ್ಕ ಕೆಲಸವನ್ನು ಕೂಡಾ ಸ್ವತಂತ್ರಿಸಿ ಮಾಡದಿರಲು ಕಾರಣ, ಅವನ ಬೆಳೆಸುವಿಕೆಯಲ್ಲಿದ್ದ ನಮ್ಮ ಲೋಪ ವೆಂದು ಬಹಳ ನಿಧಾನವಾಗಿ ನಮಗೆ ಗೊತ್ತಾಯಿತು " ಎಂದನು.

"ಹಾಗೇನು ?" ಎಂದು ಆನಂದನು ಸುಮ್ಮ ನಾದನು. "ಹೌದು ಹಾಗೇನೇ. ರೆಕ್ಕೆಗಳು ಬಲವಾಗಿ ಹಾರಲು ಸಿದ್ಧವಾದ ಮಕ್ಕಳನ್ನು ಗೂಡಿನೊಳಗಿಟ್ಟು ಆಹಾರ ತಂದು ಕೊಡುವುದನ್ನು ಬಿಡದಿದ್ದರೆ ಏನಾದೀತು ? ತಮಗೆ ಹಾರುವ ಶಕ್ತಿ ಇದೆ ಎಂಬುದೇ ಅವುಗಳಿಗೆ ಗೊತ್ತಾಗುವುದಿಲ್ಲ. ನಮ್ಮ ಮಗನ ವಿಷಯ ದಲ್ಲಿ ಅದೇ ನಡೆಯಿತು. ಅಂತೂ ಈಗ ನಮ್ಮವನ ಸಲಹೆಯ ಸಂಸಾರ ಸ್ವತಂತ್ರಕ್ಕೆ ತಿರುಗಿತಪ್ಪ ! ನಮಗೂ ನೆಮ್ಮದಿ" ಎಂದನು ರಾಮನಾಥ.



# ಕೆಟ್ಟ ವಾರ್ತೆ

ಸೀತಾಪತಿ ಅತ್ಯಂತ ಸೋಮಾರಿ. ಸೋಮಯ್ಯನ ಅಂಗಡಿಯಲ್ಲಿ ಅವನಿಗೆ ಕೆಲಸ. ಅವನ ತಂದೆ ಅದೇ ಅಂಗಡಿಯ ವಿಶ್ವಾಸದವನಾಗಿ ದುಡಿದುಕೊಂಡಿದ್ದುದರಿಂದ, ಸೀತಾಪತಿಯ ಸೋಮಾರಿತನವನ್ನು ಯಜಮಾನ ಸೋಮಯ್ಯ ಅಷ್ಟೇನೂ ಲಕ್ಷ್ಯ ಮಾಡಲಿಲ್ಲ.

ಒಂದು ದಿನ ಪಟ್ಟಣದಿಂದ ಗಾಡಿಯಲ್ಲಿ ಸರಕುಗಳನ್ನು ಸಾಗಿಸಿಕೊಂಡು ಬರುವಾಗ ದಾರಿಯಲ್ಲಿ ಗಾಡಿ ಮಗುಚಿ ಬಿದ್ದಿತು. ಸೀತಾಪತಿಗೆ ದೊಡ್ಡ ದೊಡ್ಡ ಗಾಯಗಳಾದುವು. ಅವನನ್ನು ಗಾಡಿಯವನು ಭದ್ರವಾಗಿ ತಂದು ಮನೆಗೆ ಸೇರಿಸಿದನು. ವೈದ್ಯ ಅನಂತಾಚಾರ್ಯರು ಬಂದು ಗಾಯಗಳಿಗೆ ಮದ್ದು ಹಾಕಿ ಕಟ್ಟು ಕಟ್ಟಿದರು. ಸೋಮಯ್ಯ ಕೂಡಾ ಸ್ವತಃ ಸೀತಾಪತಿಯನ್ನು ನೋಡಲು ಬಂದು, "ಜೀವದೊಂದಿಗೆ ಬದುಕಿ ಉಳಿದಿದ್ದೇ ದೊಡ್ಡದು. ಗಾಯಗಳು ಪೂರ್ತಿ ವಾಸಿಯಾಗುವ ವರೆಗೂ ಅಂಗಡಿಗೆ ಬರಬೇಡಪ್ಪಾ. ಅದಕ್ಕಾಗಿ ಸಂಬಳದಲ್ಲಿ ಏನೂ ಹಿಡಿಯುವುದಿಲ್ಲ ಬಿಡು" ಎಂದನು.

ಈ ಮೊದಲು ಸೀತಾಪತಿಯ ಸೋಮಾರಿತನವನ್ನು ನೋಡಿ ರೇಗಿಕೊಂಡಿದ್ದ ಅವನ ಹೆಂಡತಿ ಈಗ ಬಹಳ ಶ್ರದ್ಧೆಯಿಂದ ಅವನಿಗೆ ಸೇವೆ ಮಾಡತೊಡಗಿದಳು. ಬಂಧುಗಳು ಅವನನ್ನು ನೋಡಲು ಬರುವಾಗ ಹಣ್ಣು ತರಕಾರಿಗಳನ್ನು ತಂದು ಕೊಟ್ಟು ಹೋಗುತ್ತಿದ್ದರು.

ಹತ್ತು ದಿನಗಳು ಕಳೆದ ಮೇಲೆ ಅನಂತಾಚಾರ್ಯರು ಬಂದು, ಸೀತಾಪತಿಯ ಕಟ್ಟುಗಳನ್ನು ಬಿಚ್ಚಿ ಪರೀಕ್ಷೆ ಮಾಡಿ, ಏಕೋ ಕರುಣೆಯ ಭಾವದಲ್ಲಿ, "ಸೀತಾಪತಿ ! ನಿನಗೆ ಕೆಟ್ಟ ವಾರ್ತೆ ಹೇಳಬೇಕಾಗಿ ಬಂದುದಕ್ಕೆ ಬಹಳ ಚಿಂತೆಯಾಗಿದೆ. ನಿನ್ನ ಕೀಲುಗಳು ಪೂರ್ತಿ ಕೆಟ್ಟುಹೋಗಿವೆ. ಕಡೇ ಪಕ್ಷ ಎರಡು ಮೂರು ತಿಂಗಳು ಕಳೆದ ಹೊರತು, ನಿನಗೆ ನಡೆಯುವ ಶಕ್ತಿ ಬಾರದು" ಎಂದು ಹೇಳಿ ತನ್ನ ಮದ್ದಿನ ಪೆಟ್ಟಿಗೆ ತೆಗೆದುಕೊಂಡು ಹೊರಟು ತಲೆಬಾಗಿಲ ವರೆಗೆ ಹೋದರು.

ಸೀತಾಪತಿ ನಿಲ್ಲಿರೆಂದು ಕೂಗಿ ಅವರ ಕಡೆಗೆ ಕೈಯಾಡಿಸಿ, "ಅದೇನೋ ಕೆಟ್ಟವಾರ್ತೆ ಹೇಳುವೆನೆಂದಿರಲ್ಲಾ ? ಅದನ್ನು ಹೇಳದೆಯೇ ಹೋಗುತ್ತಿದ್ದೀರಿ !" ಎಂದನು.

ಅನಂತಾಚಾರ್ಯರು ಅವನ ಪ್ರಶ್ನೆಯನ್ನು ಕೇಳಿ ಇದ್ದ ಜಾಗದಲ್ಲೇ ಸ್ವಲ್ಪ ಹೊತ್ತು ಸುಮ್ಮನೆ ನಿಂತರು.





# ಒಂದಾಬಗ

ಒಂದು ಊರಿನಲ್ಲಿ ಚೇತನನೆಂಬೊಬ್ಬ ಯುವಕ ನಿದ್ದನು. ಚಿಕ್ಕಂದಿನಲ್ಲೇ ಹೆತ್ತವರನ್ನು ಕಳೆದುಕೊಂಡ ಅವನು, ಬಂಧುಗಳ ಸಹಾಯದಿಂದ ಓದಿಕೊಂಡು ಕಷ್ಟಪಟ್ಟು ಆ ಊರಿನಲ್ಲಿ ಉದ್ಯೋಗ ಸಂಪಾದಿಸಿ ಕೊಂಡು ಬಂದು, ಒಬ್ಬನೇ ಒಂದು ಬಾಡಿಗೆಯ ಮನೆ ಹಿಡಿದು ವಾಸಮಾಡಿಕೊಂಡಿದ್ದನು. ಮನೆ ಗೆಲಸ, ಅಡಿಗೆಗಳಿಗೆಲ್ಲ ಅವನಿಗೆ ಅವನೇ.

ಒಂದುದಿನ ಬೆಳಿಗ್ಗೆ ಅವನು ಬೇಗಬೇಗನೇ ಅಡಿಗೇ ಕೆಲಸಕ್ಕೆ ತೊಡಗಿದ್ದನು. ಆಮೇಲೆ ಕಚೇರಿಗೆ ಹೋಗಬೇಕಷ್ಟೆ? ಆಗ ಬೀದಿಯಲ್ಲಿ ಏನೋ ಮಾತಿನ ಶಬ್ದಗಳು ಕೇಳಿಸಿದುವು. ಮನೆಯ ಮುಂದೆಯೇ ಯಾರಾರೋ ಸೇರಿದಂತಿದ್ದಿತು. ಏನೆಂದು ಹೊರಗೆ ಹೋಗಿ ನೋಡಿದಾಗ, ಒಂದು ಕುದುರೆಗಾಡಿ ನಿಂತಿತ್ತು. ಅದರ ಸುತ್ತಲೂ ಅನೇಕರು ಕೂಡಿದ್ದರು. ಗಾಡಿಯೊಳಗೆ ಸುಮಾರು ಐವತ್ತು ತುಂಬಿದ ದೊಡ್ಡ ಮನುಷ್ಯನೊಬ್ಬ ಬಿದ್ದುಕೊಂಡಿದ್ದನು.

ಅವನು ಹೊರಗಿನ ಊರಿನಿಂದ ಏನೋ ಕೆಲಸಕ್ಕೆ ಈ ಊರಿಗೆ ಬಂದನಂತೆ. ತನ್ನ ಊರಿಗೆ ಹೋಗಲು ಗಾಡಿಯಲ್ಲಿ ಬರುವಾಗ ಅವನಿಗೆ ಎದೆನೋವು ಎದ್ದು ಬಿದ್ದನಂತೆ. ಗಾಡಿಯುವನು ಗಾಬರಿಯಾಗಿ ಅಲ್ಲಿ ಗಾಡಿ ನಿಲ್ಲಿಸಿದ್ದ. ಕೂಡಿದ ಜನರಲ್ಲಿ ಒಬ್ಬಿಬ್ಬರು, "ಪ್ರಾಣ ಉಳಿಯುವುದು ಕಷ್ಟ. ಇವರ ಊರಿಗೇ ಹೊಡೆದುಕೊಂಡು ಹೋಗು" ಎಂದು ಗಾಡಿಯವನೊಂದಿಗೆ ಹೇಳಿದರು.

ಗಾಡಿಯುವನು ಕುದುರೆಯನ್ನು ಮುಂದೆ ಸಾಗಿಸ ಲಿರುವಾಗ ಚೇತನನು ಅಡ್ಡಬಂದು, "ಎದೆನೋವು ಬಂದಿರುವಾಗ ಪ್ರಯಾಣ ಮಾಡುವುದು ಒಳ್ಳೇದಲ್ಲ. ಅವರಿಗೆ ವಿಶ್ರಾಂತಿ ಅತ್ಯಗತ್ಯ. ಇವರು ನನ್ನ ಮನೆಯಲ್ಲಿ ಸ್ವಲ್ಪಹೊತ್ತು ಮಲಗಿರಲಿ" ಎಂದು ಗಾಡಿಯುವನ ಸಹಾಯದಿಂದ. ರೋಗಿಯನ್ನು ಎತ್ತಿ ಮನೆಯೊಳಗೆ ತಂದು, ಹಾಸಿಗೆ ಸರಿಮಾಡಿ ಅದರಲ್ಲಿ ಮಲಗಿಸಿದನು.

ತರುವಾಯ ಚೇತನನು ಗಾಡಿಯುವನಿಂದ ವೈದ್ಯ ರನ್ನು ಕರೆಯಿಸಿದನು. ವೈದ್ಯರು "ಏನೂ ಪರವಾಗಿಲ್ಲ, ಕಡಿಮೆಯಾಗುತ್ತದೆ" ಎಂದು ಔಷಧ ಕೊಟ್ಟು ಹೊರಟುಹೋದರು. ಆ ದಿನ ಕಚೇರಿಗೆ ಬರಲಾಗುವು ದಿಲ್ಲವೆಂದು ಆ ಗಾಡಿಯುವನ ಹತ್ತಿರವೇ ಚೀಟು ಬರೆದು ಕಳುಹಿಸಿದನು ಚೇತನ.

ಎಂ. ಕೆ. ಈಶ್ವರರಾವ್

ಮಧ್ಯಾಹ್ನ ತಿರುಗುವಷ್ಟರಲ್ಲಿ, ಸ್ಪೃಹೆ ತಪ್ಪಿದ್ದ ರೋಗಿಗೆ ಎಚ್ಚರ ಬಂತು. ಆತ ತಾನಿರುವ ಹೊಸ ಪ್ರದೇಶವನ್ನು ನೋಡಿ ಆಶ್ಚರ್ಯಪಡುತ್ತ, ಎದ್ದು ಕುಳಿತು, ಚೇತನನನ್ನು ನೋಡಿ, ತಾನು ಎಲ್ಲಿಗೆ ಬಂದಿದ್ದೇನೆ ಎಂದು ಕೇಳಿದನು.

ಚೇತನನು ಅವನಿಗೆ ನಡೆದ ಸಮಾಚಾರವನ್ನೆಲ್ಲ ಹೇಳಿ, "ಈಗ ನಿಮಗೆ ಹೇಗಿದೆ ? ಇನ್ನೊಂದುಸಾರಿ ಔಷಧ ಕೊಡಲು ವೈದ್ಯರು ಹೇಳಿದ್ದಾರೆ." ಎಂದನು.

ಆತನು ಚೇತನನನ್ನು ಆಪ್ಯಾಯತೆಯಿಂದ ನೋಡಿ, "ನನ್ನ ಹೆಸರು ರಾಮಭದ್ರಯ್ಯನೆಂದು. ಈ ಊರಿನ ಅಂಗಡಿಯವರಿಂದ ಅಕ್ಕೀಹಣ ವಸೂಲು ಮಾಡಲು ಬಂದಿದ್ದೆ. ನೀನು ಆಪದ್ಬಾಂಧವನ ಹಾಗೆ ಪ್ರಾಣ ಉಳಿಸಿದೆಯಪ್ಪ. ಅಸಲೇ ನಾನು ಎದೆರೋಗದ ಮನುಷ್ಯ. ನಿನ್ನ ಸಹಾಯ ಈ ಜನ್ಮದಲ್ಲಿ ಮರೆಯಲಾರೆ !" ಎಂದನು.

ತರುವಾಯ ಚೇತನನು ರಾಮಭದ್ರಯ್ಯನಿಗೆ ಸ್ನಾನ ಮುಂತಾದುವುಗಳನ್ನು ಅಣಿಗೊಳಿಸಿಕೊಟ್ಟನು. ಆತ ಸ್ನಾನಮಾಡಿ ಬಂದ ಮೇಲೆ ಬಿಸಿಬಿಸಿಯಾಗಿ ಊಟ ಬಡಿಸಿದನು.

ಈ ಅಡಿಗೆ ಮಾಡಿದವನು ಚೇತನನೇ ಎಂದು ತಿಳಿದು ರಾಮಭದ್ರಯ್ಯ, "ಅರೆ ! ಅಡಿಗೆ ಬಹಳ ಚೆನ್ನಾಗಿದೆ ! ಊಟ ಮಾಡುವಾಗ ನನ್ನ ಮನೆಯಲ್ಲೇ ನಾನು ಊಟಮಾಡುವೆನೋ ಅನಿಸಿತು." ಎಂದನು.

ಹೀಗೆ ಸುಧಾರಿಸಿಕೊಂಡ ರಾಮಭದ್ರಯ್ಯ ಹೊರಟುಹೋಗಲು ಸಿದ್ಧನಾದನು.

ಎದೆನೋವಿನವರನ್ನು ಒಬ್ಬರನ್ನೇ ಕಳುಹಿಸುವುದು ಒಳ್ಳೆಯದಲ್ಲವೆಂದುಕೊಂಡು ಚೇತನನು, ಗಾಡಿಯಲ್ಲಿ ವೀರಭದ್ರಯ್ಯನೊಂದಿಗೆ ತಾನೂ ಹೊರಟನು.

ಊರು ಸೇರುವಾಗ ಸಾಯಂಕಾಲವಾಯಿತು. ರಾಮಭದ್ರಯ್ಯ ಚೇತನನನ್ನು ಹೆಂಡತಿಗೂ, ಮಗನಿಗೂ, ಮಗಳಿಗೂ ಪರಿಚಯಮಾಡಿಸಿ



ಚೇತನನು ಮಾಡಿದ ಸಹಾಯವನ್ನು ಕುರಿತು ಶ್ಲಾಘಿಸಿ ಮಾತಾಡಿದನು. ಎಲ್ಲರೂ ಅವನಿಗೆ ತಮ್ಮ ಕೃತಜ್ಞತೆಯನ್ನು ಹೇಳಿಕೊಂಡು, ಆ ರಾತ್ರಿ ತಮ್ಮಲ್ಲೇ ಇದ್ದು ಮರುದಿನವೇ ಹೋಗಬೇಕೆಂದು ಒತ್ತಾಯ ಪಡಿಸಿದರು. ಅವರ ಕೋರಿಕೆಯನ್ನು ಮೀರಲಾರದೆ ಚೇತನನು ಒಪ್ಪಿಕೊಂಡನು.

ರಾಮಭದ್ರಯ್ಯನ ಮಗ ಚೇತನನನ್ನು ಆ ಊರಿನಲ್ಲಿರುವ ವಿಶೇಷಗಳನ್ನು ತೋರಿಸಲು ಕರೆದುಕೊಂಡು ಹೋದನು. ರಾಮಭದ್ರಯ್ಯ ತನ್ನ ಹೆಂಡತಿಯೊಂದಿಗೆ, "ಅಲ್ಲಾ, ಈ ಹುಡುಗನನ್ನು ಗಮನಿಸಿದೆಯಷ್ಟೇ. ಬುದ್ಧಿವಂತನಾಗಿ ಒಳ್ಳೆಯವನಾಗಿ ಕಾಣುತ್ತಾನೆ. ನಮ್ಮ ಹುಡುಗಿಗೆ ಇವನಿಗಿಂತ ಒಳ್ಳೆಯವನು ಸಿಕ್ಕುವನೆಂದು ನನಗೆ ತೋರುವುದಿಲ್ಲ. ಏನನ್ನುವಿ ?" ಎಂದು ಕೇಳಿದನು.

"ನನಗೂ ನಿಮ್ಮ ಹಾಗೆಯೇ ಕಾಣುತ್ತದೆ, ಕೇಳಿನೋಡಬಹುದು" ಎಂದಳು ಹೆಂಡತಿ.



ಆ ಸಮಯದಲ್ಲಿ ಮಗಳು ಪುಷ್ಪಾ ಅಲ್ಲಿಯೇ ಇದ್ದಳು. ಅವಳು ತಾಯಿ ತಂದೆಯರ ಕೊಂಡಾಟದ ಮಗಳಾಗಿ ಬೆಳೆದ ಏಕೈಕ ಪುತ್ರಿ. ಅಡಿಗೆ ಮಾಡಲಿಕ್ಕೆ ಗೊತ್ತಿದ್ದರೂ, ಅಡಿಗೆ ಕೋಣೆಯೆಂದರೆ ಹೀಯಾಳಿಕೆಯಾಗಿತ್ತು ಅವಳಿಗೆ. ಅದರ ಮೇಲೆ ಬಹಳ ಉದಾಸೀನದ ಹುಡುಗಿ.

ತಂದೆತಾಯಿಗಳು ಹೇಳಿದ ಮಾತುಗಳನ್ನು ಕೇಳಿ "ಅಲ್ಲಪ್ಪಾ, ಈತನೊಂದಿಗೆ ಆ ಮನೆಯಲ್ಲಿ ಇನ್ನು ಯಾರು ಯಾರು ಇದ್ದಾರೆ ? " ಎಂದು ಕೇಳಿದಳು. "ಅವನಿಗೆ ಹತ್ತಿರದ ಬಂಧುಗಳು ಅಂತ ಯಾರೂ ಇಲ್ಲವಂತೆ. ಅವನ ಪಾಡಿಗೆ ಒಬ್ಬನೇ ಇದ್ದಾನೆ" ಎಂದನು ರಾಮಭದ್ರಯ್ಯ.

"ಒಬ್ಬನೇನಾ ? ಹಾಗಾದರೆ ಅಡಿಗೆ ಮಾಡುವುದು ಯಾರು ? " ಎಂದಳು ಪುಷ್ಪ.

"ಅವನೇ ಅಡಿಗೆ ಮಾಡಿಕೊಳ್ಳುತ್ತಾನೆ. ಅಚ್ಚ ನಿನ್ನಮ್ಮ ಮಾಡುವ ಅಡಿಗೆಯ ಹಾಗೆಯೇ ಮಾಡುತ್ತಾನೆ. ಬಹಳ ಗಟ್ಟಿಗ" ಎಂದನು ರಾಮಭದ್ರಯ್ಯ ಸಣ್ಣಗೆ ನಗುತ್ತ.

ತಂದೆ ಹೇಳಿದ ಮಾತುಗಳಿಂದ ಚೇತನನು ಬುದ್ಧಿವಂತನೆಂದೂ, ಒಳ್ಳೆಯ ಗುಣದವನೆಂದೂ ತೋರಿದುದರ ಮೇಲೆ, ತನ್ನ ದೃಷ್ಟಿಗೆ ಸುಂದರನಾಗಿಯೂ ಕಾಣುತ್ತಿದ್ದಾನೆ ! ಅಂತಲೇ ಪುಷ್ಪ ಈ ಮದುವೆಗೆ ಒಪ್ಪಿಗೆ ಕೊಟ್ಟಳು.

ಆ ರಾತ್ರಿ ಊಟವಾದ ಮೇಲೆ ರಾಮಭದ್ರಯ್ಯ ಚೇತನನನ್ನು ಮಾಳಿಗೆಯ ಮೇಲಕ್ಕೆ ಕರೆದುಕೊಂಡು ಹೋಗಿ, "ನೋಡಯ್ಯ, ನೀನು ಈ ಮನೆಯಲ್ಲಿರುವವರಿಗೆಲ್ಲಾ ಚೆನ್ನಾಗಿ ಹಿಡಿಸಿರುವೆ. ನನ್ನ ಮಗಳನ್ನು ನೋಡಿದೆಯಷ್ಟೇ ? ನಿನಗೆ ಕೊಟ್ಟು ಮದುವೆ ಮಾಡೋಣವೆಂದು ನಮ್ಮ ಇಷ್ಟ. ಒಪ್ಪಿಗೆ ನೀಡುವೆಯಷ್ಟೆ ? " ಎಂದು ಕೇಳಿದನು.

ಚೇತನನು ಬೆರಗಾಗಿ ಸ್ವಲ್ಪಹೊತ್ತು ಸುಮ್ಮನಿದ್ದನು. ಇದು ಅವನು ಸ್ವಲ್ಪವೂ ಊಹಿಸದಿರುವ ಸಂಗತಿಯಾಗಿತ್ತು. ಇತ್ತೀಚೆಗೆ ಅವನ ಒಂಟಿ ಬದುಕು ಬೇಸರ ತರುತ್ತಿದ್ದುದು ನಿಜವೇ. ಆರೋಗ್ಯದಿಂದಿರುವ ಸುಂದರಿಯಾಗಿ ಕಾಣುವ ಪುಷ್ಪಳೊಂದಿಗೆ ಮದುವೆ ಬೇಡವೆಂದು ಅಭ್ಯಂತರ ಹೇಳುವಂತಹ ಕಾರಣವೇನೂ ಅವನಿಗೆ ಕಾಣಲಿಲ್ಲ. "ಸರಿ" ಎಂದು ಕಡೆಗೆ ತಲೆಯಾಡಿಸಿಬಿಟ್ಟನು.

ಮುಂದೆ ಒಂದು ತಿಂಗಳು ಕಳೆಯುವುದರೊಳಗೆ ಪುಷ್ಪಳೊಂದಿಗೆ ಅವನ ಮದುವೆಯಾಗಿ ಹೋಯಿತು. ಅವಳು ಅವನೊಂದಿಗೆ ಸಂಸಾರ ನಡೆಸಲು ಬಂದುದೂ ಆಯಿತು. ಬಂದ ಮರುದಿನ ಬೆಳಿಗ್ಗೆ ಮಾರುದ್ದ ಹೊತ್ತೇರಿದ ಮೇಲೆ ಹೊರತು, ಅವಳು ನಿದ್ದೆಯಿಂದ ಏಳಲಿಲ್ಲ. ತಾನಾಗಿ ಅವಳನ್ನು ಎಬ್ಬಿಸಲೂ ಇಷ್ಟವಿಲ್ಲದೆ, ಕಚೇರಿಗೆ ಹೊತ್ತು ಮೀರುವುದೆಂಬ ಅವಸರದಲ್ಲಿ ಚೇತನನೇ ಗಡಿಬಿಡಿಯಿಂದ ಅಡಿಗೆ ಕೆಲಸ ಮುಗಿಸಿ, ತಾನಿಷ್ಟು ಬಡಿಸಿ

ಕೊಂಡು ಉಂಡು ಹೊರಟುಹೋದನು. ಆ ದಿನ ಸಾಯಂಕಾಲ ಅವನು ಮನೆಗೆ ಹಿಂದಿರುಗಿ ಬಂದ ಮೇಲೆ ಪುಷ್ಪಾ ಗುಡಿಗೆ ಹೋಗಿಬರುತ್ತೇನೆಂದು ಹೇಳಿ ಹೊರಟುಹೋದಳು. ಮತ್ತೆ ತಡವಾಗುತ್ತೇನೋ ಎಂದುಕೊಂಡು ಚೇತನನೇ ರಾತ್ರಿಯ ಅಡಿಗೆಯನ್ನೂ ಮಾಡಿದನು.

ರಾತ್ರಿಯಲ್ಲಿ ಪುಷ್ಪಾ ಊಟಮಾಡುವಾಗ, "ಅಪ್ಪ ಹೇಳಿದರೆ ನಾನು ನಂಬಲಿಲ್ಲ. ನಿಮ್ಮ ಅಡಿಗೆ ನಿಜಕ್ಕೂ ನನ್ನಮ್ಮನ ಅಡಿಗೆಯ ಹಾಗೇ ಇದೆ" ಎಂದಳು ಉತ್ಸಾಹದಿಂದ.

ಹೆಂಡತಿ ಹಾಗೆ ಹೊಗಳಿದುದನ್ನು ಕೇಳಿ ಚೇತನನು ಉತ್ಸಾಹದಿಂದ ಉಬ್ಬಿದನು. ಆದರೆ ಮರುದಿನ ಕೂಡಾ ಬೆಳಗಾಗಿ ಅಷ್ಟು ಹೊತ್ತಾದರೂ ಹೆಂಡತಿ ನಿದ್ದೆಯಿಂದ ಏಳದಿರುವುದನ್ನು ನೋಡಿ, ಚೇತನನು ಅವಳನ್ನು ತಟ್ಟಿ ಎಬ್ಬಿಸಿ, "ಕಚೇರಿಗೆ ಹೊತ್ತಾಗುತ್ತದೆ. ಅಡಿಗೇ ಕೆಲಸ ನೋಡಿಕೋ" ಎಂದನು. ಅಡಿಗೆಯ ಮಾತು ಕೇಳಿದ ಕೂಡಲೇ ಪುಷ್ಪಾ ತಲಮಳಗೊಳ್ಳುತ್ತ ಏನು ಹೇಳಲೂ ತೋರದೆ, "ಮೈಸರಿ ಇಲ್ಲಾರೀ!" ಎಂದುಬಿಟ್ಟಳು.

ಈವಿಧವಾಗಿ ಪುಷ್ಪಾ ಏನೋ ಒಂದು ನೆಪ ಹೇಳುತ್ತಾ, ಆರೇಳು ದಿನಗಳ ವರೆಗೆ ಚೇತನನೇ ಅಡಿಗೆಮಾಡುವ ಹಾಗೆ ಮಾಡಿಬಿಟ್ಟಳು. ಅಷ್ಟೇ ಅಲ್ಲದೆ ಮೇಲಿನ ಬೂಜು ತೆಗೆಯಲು ತನಗೆ ಎಟಕುವುದಿಲ್ಲವೆಂದೂ, ಸೊಂಟ ನೋಯುವುದೆಂದೂ, ಕಾಲು ಉಳುಕಿತೆಂದೂ ಅವನೇ ಕಸಗಪ್ಪು ಬಳಿಯುವ ಹಾಗೂ ಮಾಡುತ್ತಿದ್ದಳು.

ಕಡೆಗೆ ಈ ಕಣ್ಣು ಮುಚ್ಚಾಲೆಯಾಟ ಪುಷ್ಪಾಳಿಗೇ ಬೇಸರ ಬಂದುದರಿಂದ, ತನಗೆ ಅಮ್ಮ ಅಪ್ಪಂದಿರನ್ನು ನೋಡುವ ಆಸೆಯಾಗುತ್ತದೆಂದು ಹೇಳಿ ತೌರು ಮನೆಗೆ ಪ್ರಯಾಣ ಹೊರಟಳು.

ಹದಿನೈದು ದಿನಗಳ ಮೇಲೆ ಅವಳು ಹಿಂದಿರುಗಿ ಬಂದು ಗಂಡನೊಂದಿಗೆ, "ಇವತ್ತು ನನಗೊಂದು ಸೀರೆ ಕೊಂಡುಕೊಂಡು ತನ್ನಿರಿ" ಎಂದಳು. "ಈಗ ಸೀರೆಯ ಅಗತ್ಯ ಏನು ಬಂತು?





ಹಬ್ಬ ಹಾಡಿ ಏನೂ ಅಲ್ಲವಲ್ಲ ? " ಎಂದನು ಚೇತನ ಬೇಸರದಿಂದ ಹುಬ್ಬು ಸುರುಗಿಸಿ.

"ಹಬ್ಬದ ಗೊಡವೆ ಈಗ ಏಕೆ ? ಯಾವಾಗಲೂ ತಿಂಗಳಿಗೊಂದು ಸೀರೆ ಕೊಂಡುಕೊಳ್ಳುವುದು ಅಮ್ಮ ಅಪ್ಪಂದಿರ ಕ್ರಮ." ಎಂದಳು ಪುಷ್ಪ ನಸುಗೋಪವನ್ನು ತೋರಿಸುತ್ತ.

ಆ ದಿನ ಸಾಯಂಕಾಲ ಚೇತನನು ಹೆಂಡತಿಯನ್ನು ಪೇಟೆಗೆ ಕರೆದುಕೊಂಡು ಹೋಗಿ, ಒಂದು ಸೀರೆಯನ್ನು ಕೊಂಡುಕೊಂಡನು. ಹಿಂದಿರುಗಿ ಬರಲು ಬಾಡಿಗೆಯ ಗಾಡಿಯನ್ನು ಹತ್ತುವಾಗ, ಪುಷ್ಪಳ ಕೈ ಉಳುಕಿಕೊಂಡಿತು. ಆದುದರಿಂದ ಎಂದಿನಂತೆ ಅಡಿಗೆಯ ಕೆಲಸ ಚೇತನನಿಗೇ ಬಂತು. ಕೈನೋವಿನ ನೆವನದಿಂದ ಮತ್ತೆ ಕೆಲವು ದಿನಗಳವರೆಗೆ ಅವನೇ ಅಡಿಗೆ ಮಾಡಬೇಕಾಯಿತು. ಹೀಗೆ ದಿನದಿನ ಗಂಡಾಂತರದ ಹಾಗೆ ಅಡಿಗೇ ಕೆಲಸವನ್ನು ತಪ್ಪಿಸಿಕೊಳ್ಳುವುದು ಅವಳಿಗೆ ಉಪದ್ರವೆನಿಸಿ, ಒಂದುದಿನ ಗಂಡನೊಂದಿಗೆ, "ಅಲ್ಲಾಂದ್ರೆ, ನಮ್ಮ ಮದುವೆಗೆ ಮೊದಲಿನಲ್ಲಿ ನಿಮಗೆ ಯಾರು ಅಡಿಗೇ ಮಾಡಿ ಹಾಕುತ್ತಿದ್ದರು ?" ಎಂದು ಒಂದು ಪ್ರಶ್ನೆ ಮಾಡಿದಳು.

"ನಾನೇ ಮಾಡಿಕೊಳ್ಳುತ್ತಿದ್ದೆ" ಎಂದನು ಚೇತನ.

ಆ ಉತ್ತರವನ್ನು ಕೇಳಿ ಸಂತೋಷಪಟ್ಟ ಪುಷ್ಪಾ, "ಹಾಗೆ ಹೇಳಿರಿ ! ಮತ್ತೆ ಈಗ ಮಾತ್ರ ನನ್ನನ್ನು ಅಡಿಗೆ ಮಾಡೇ ಅಂತ ಯಾಕೆ ಹೇಳ್ತೀರಿ ? ಪ್ರತಿಯೊಂದನ್ನೂ ಒಂದು ಮುಷ್ಟಿಗೆ ಬದಲು ಎರಡು ಮುಷ್ಟಿ ನಿಮಗೇ ಹಾಕಬಹುದಲ್ಲ ? ಇಬ್ಬರಿಗೂ ಮೊದಲಿನ ಹಾಗೇ ಅಡಿಗೆ ಸಿದ್ಧವಾಗುವುದಿಲ್ಲವೆ ? ಕಷ್ಟವೇನಿದೆ ?" ಎಂದಳು.

ಈ ಮಾತಿನಿಂದ ಚೇತನನಿಗೆ ಹೆಂಡತಿಯ ಅಂತರ್ಗತವು ಪೂರ್ತಿ ಅರ್ಥವಾಯಿತು.

ಮರುದಿನ ಬೆಳಿಗ್ಗೆ ಅವನು ಕಚೇರಿಗೆ ಹೊರಡುವಾಗ ಪುಷ್ಪಾ, "ಸೀರೆ ತಂದು ಬಹಳ ಕಾಲವಾಯಿತು. ಸಾಯಂಕಾಲ ಬರುವಾಗ ಒಂದು ಒಳ್ಳೇ ಸೀರೆ ತಂದುಬಿಡಿ" ಎಂದಳು.

ಚೇತನನು ಅವಳಿಗೇನೂ ಉತ್ತರ ಕೊಡದೆ ಮೌನವಾಗಿ ಹೊರಟು ಹೋದನು. ಸಾಯಂಕಾಲ ಕಚೇರಿಯಿಂದ ಹಿಂದಿರುಗುವಾಗ, ತಾನು ವಾಡಿಕೆಯಾಗಿ ಕೊಂಡು ಕೊಳ್ಳುವ ಜವಳೀ ಅಂಗಡಿಗೆ ಹೋದನು. ಅಲ್ಲಿ ಒಂದರ ಮೇಲೊಂದಾಗಿ ಪೇರಿಸಿಟ್ಟಿರುವ ಸೀರೆಗಳಲ್ಲಿ, ಕೆಂಪು ಬಣ್ಣದ ಸೀರೆ ತೆಗೆದುಕೊಡುವಂತೆ ಅಂಗಡಿಯವನಿಗೆ ಹೇಳಿದನು.

"ಕಳೆದ ಸಾರಿ ನೀವೂ ನಿಮ್ಮ ಶ್ರೀಮತಿಯವರೂ ಬಂದಾಗ ಇಂತಹ ಸೀರೆ ತಾನೇ ಕೊಂಡು ಕೊಂಡಿದ್ದೀರಿ ? ಈಗ ನಿಮಗೆ ಹಿಡಿಸಿದ ಇನ್ನೊಂದು ಬೇರೆ ಬಣ್ಣದ ಸೀರೆಯನ್ನು ತೆಗೆದುಕೊಳ್ಳಿರಿ" ಎಂದನು ಅಂಗಡಿಯವನು. "ಬೇಡ, ಅದನ್ನೇ ತೆಗೆದುಕೊಡು" ಎಂದು ಹೇಳಿ,

ಅದಕ್ಕೆ ತಕ್ಕ ಹಣಕೊಟ್ಟು ಚೇತನನು ಆ ಸೀರೆಯೊಂದಿಗೆ ಮನೆಗೆ ಬಂದನು. ಆ ಸೀರೆಯನ್ನು ನೋಡಿದ ಕೂಡಲೇ ಪುಷ್ಪಾ ಮುಖವನ್ನು ಸೊಟ್ಟ ಮಾಡಿ "ಅಯ್ಯಯ್ಯಾ! ಕಳೆದ ಸಾರಿ ತೆಗೆದುಕೊಂಡ ಬಣ್ಣದ್ದೇ ಈಗಲೂ ತಂದಿರಲ್ಲ! ಇದನ್ನು ವಾಪಾಸು ಕೊಟ್ಟು ಇನ್ನೊಂದು ತನ್ನೀಂದ್ರೆ" ಎಂದಳು ಅಂಗಲಾಚುತ್ತ.

"ಮತ್ತೆ ಯಾರು ಹೋಗುತ್ತಾರೆ? ನಿನ್ನ ಹತ್ತಿರವಿರುವ ಎಲ್ಲಾ ಸೀರೆಗಳಲ್ಲಿ ಒಂದೇ ಬಣ್ಣದ್ದು ಎರಡು ಸೀರೆ ಇದ್ದರೆ ಏನು ಮುಳುಗಿಹೋಗುತ್ತೆ!" ಎಂದನು ಬೇಸರದಿಂದ ಚೇತನ.

"ಏನೋ ಬಹಳ ಬುದ್ಧಿವಂತರ ಹಾಗೆ ಮಾತಾಡಿದೆನೆಂದು ಕೊಂಡರಾಯಿತೇ? ಯಾರೂ ಒಂದೇ ನಮೂನೆಯ ಸೀರೆ ಉಡಲು ಇಷ್ಟಪಡುವುದಿಲ್ಲ. ಇಪ್ಪತ್ತು ಸೀರೆಗಳಿದ್ದರೂ ಬಣ್ಣದಲ್ಲಿಯೂ ಬೆಲೆಯಲ್ಲಿಯೂ ವ್ಯತ್ಯಾಸವಿದ್ದರೇನೇ ಚೆಂದ. ನಾನು ಚೆಂದಾಗಿರೋದು ನಿಮಗೆ ಇಷ್ಟವಿಲ್ಲಾ ಅನ್ನುವಿರೇನು?" ಎಂದಳು ಪುಷ್ಪ.

"ಅಬ್ಬಬ್ಬ! ಸೀರೆಗಳಲ್ಲಿ ಒಂದು ಇನ್ನೊಂದರ ಹಾಗಿದ್ದರೆ ಸಹಿಸಲಾರದ ನೀನು, ನನ್ನ ಜೀವಿತ ಮಾತ್ರ ಮದುವೆಗೆ ಮೊದಲೂ, ಮದುವೆಯಾದ ಮೇಲೆಯೂ ಒಂದೇ ಬಗೆಯಾಗಿರಬೇಕೆಂದು ಹೇಳುವಿ ಏಕೆ? ನಿನ್ನ ಅಪ್ಪನ ಆರೋಗ್ಯ ಚೆನ್ನಾಗಿಲ್ಲವೆಂದು, ನಿನ್ನ ದೂರು ಕೇಳಿ ಅವರಿಗೆ ಎದೆ ನೋವು ಬಂದರೆ ಕಷ್ಟವೆಂದು ಇಷ್ಟುದಿನ ಸುಮ್ಮನಿದ್ದೆ." ಎಂದು ಹೇಳಿ ಚೇತನನು ಆ ಕೆಂಪುಸೀರೆ ತೆಗೆದುಕೊಂಡು ಅಂಗಡಿ ಪೇಟೆಗೆ ಹೋದನು.

ಗಂಡನ ಮಾತಿನಲ್ಲಿರುವ ಸತ್ಯವನ್ನು ತಿಳಿದ ಪುಷ್ಪಾ ತಣ್ಣಗಾಗಿ ಕಣ್ಣೀರು ತುಂಬಿಕೊಂಡಳು. ಇಷ್ಟುದಿನ ಗಂಡನ ಮನಸನ್ನು ನೋಯಿಸಿದುದಕ್ಕೆ ಬಹಳ ಪಶ್ಚಾತ್ತಾಪಪಟ್ಟಳು. ತನ್ನ ತಾಯಿಯ ಅಡಿಗೆಯನ್ನು ತಂದೆ ಮೆಚ್ಚಿಕೊಳ್ಳುತ್ತಿರುವಾಗ, ತಾಯಿಯ ಮುಖದಲ್ಲಿ ಕಾಣುವ ಆನಂದವನ್ನು ನೆನಪಿಗೆ ತಂದುಕೊಂಡಳು.

ಎರಡು ಗಂಟೆಗಳ ಮೇಲೆ ಚೇತನನು ಬೇರೊಂದು ಸೀರೆಯೊಂದಿಗೆ ಹಿಂದಿರುಗುವಷ್ಟರಲ್ಲಿ, ಪುಷ್ಪಾ ಅಡಿಗೇ ಮಾಡಿಕೊಂಡಿದ್ದಳು. ಅವಳು ಕಣ್ತುಂಬಿಕೊಂಡು ಅವನ ಕಾಲಿಗೆ ಬಿದ್ದು, "ನಾನೊಬ್ಬಳು ಮೂರ್ಖಳು. ಕ್ಷಮಿಸಿರಿ!" ಎಂದಳು.

"ಅಲ್ಲ ಪುಷ್ಪಾ. ಮೂರ್ಖರಿಗೆ ಅವರ ತಪ್ಪು ತಿಳಿಯದು. ತಪ್ಪು ತಿಳಿದುಕೊಂಡ ನೀನು ಮೂರ್ಖಳು ಹೇಗಾಗುವೆ?" ಎಂದು ನಗುತ್ತಾ ಚೇತನನು ತಾನು ತಂದ ಹೊಸ ನೀಲಿರಂಗಿನ ಸೀರೆಯನ್ನು ಹೆಂಡತಿಯ ಕೈಗೆ ಕೊಟ್ಟನು.



# ಕೋಪ ಕೊಟ್ಟ ರೂಪ

ಒಬ್ಬ ಚಿತ್ರಕಾರನು ಜಮೀನ್ದಾರರನ್ನು ನೋಡಲು ಬಂದನು. ಮೊದಲೇ ಮುಂಗೋಪದ ಆ ಜಮೀನ್ದಾರರು ಏನೋ ಕೋಪದಲ್ಲಿದ್ದುದರಿಂದ, ಚಿತ್ರಕಾರನು ಹೇಳುವ ಯಾವ ಮಾತನ್ನೂ ಕಿವಿಗೇರಿಸಿಕೊಳ್ಳದೆ ಅವನನ್ನು ನಾನಾ ಮಾತುಗಳಿಂದ ಬೈದು ಕಳುಹಿಸಿಬಿಟ್ಟರು.

ಮೂರು ತಿಂಗಳ ಮೇಲೆ ಆ ಜಮೀನ್ದಾರರು ಸಭೆ ನಡೆಸಿಕೊಂಡಿರುವಾಗ, ಅದೇ ಚಿತ್ರಕಾರನು ಅವರನ್ನು ಮತ್ತೆ ನೋಡಲು ಬಂದು. ಒಂದು ಚಿತ್ರಪಟವನ್ನು ಅವರಿಗೆ ಕೊಟ್ಟು, "ತಮ್ಮ ಚಿತ್ರವನ್ನು ಬರೆದು ತಂದಿದ್ದೇನೆ. ಒಳ್ಳೆಯ ಬಹುಮಾನ ದಯಮಾಡಿಸಬೇಕು" ಎಂದು ಕೇಳಿಕೊಂಡನು.

ಜಮೀನ್ದಾರರು ಕೋಪದಿಂದ ಆ ಚಿತ್ರವನ್ನು ಸಭಿಕರ ಮುಂದೆ ಬೀಸಿ ಹಾಕಿ, "ಇದುವೋ ನನ್ನ ಚಿತ್ರ ?" ಎಂದು ಗಟ್ಟಿಯಾಗಿ ಕೂಗಿದರು.

"ಹೌದು ಮಹಾ ಸ್ವಾಮಿ ! ಹಿಂದಿನ ಸಾರಿ ತಮ್ಮ ದರ್ಶನ ಮಾಡಿದಾಗ ಕೂಡಾ ತಾವು ಹೀಗೆಯೇ ಕೋಪದಲ್ಲಿದ್ದಿರಿ" ಎಂದನು ಚಿತ್ರಕಾರ ವಿನಯದಿಂದ.

ಆ ಸಮಯದಲ್ಲಿ ಪಕ್ಕದ ಕಂಬದಲ್ಲಿರುವ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಜಮೀನ್ದಾರರು ಬೆಚ್ಚಿಬಿದ್ದರು.

ಅದು ಚಿತ್ರಕಾರನು ಬರೆದ ಚಿತ್ರದ ಹಾಗೇ ಇದೆ !

ಸಭಿಕರು ಜಮೀನ್ದಾರರ ಚಿತ್ರಪಟವನ್ನು ನೋಡಿ ಆಶ್ಚರ್ಯಪಟ್ಟರು. ಆಗ ಸಭೆಯಲ್ಲಿ ಅವರು ಹೇಗಿರುವರೋ ಚಿತ್ರದಲ್ಲಿಯೂ ಹಾಗೆಯೇ ಇದ್ದಾರೆ. ಕೋಪವು ತನ್ನ ರೂಪವನ್ನು ಹೇಗೆ ಮಾರ್ಪಡಿಸುತ್ತ ದೆಂಬುದನ್ನು ತಿಳಿಯ ಪಡಿಸಿದ ಚಿತ್ರಕಾರನನ್ನು ಜಮೀನ್ದಾರರು ಒಳ್ಳೆಯ ರೀತಿಯಲ್ಲಿ ಗೌರವಿಸಿ ಬಹುಮಾನ ದಿಂದ ತೃಪ್ತಿಪಡಿಸಿ ಕಳುಹಿಸಿದರು.

ಅಂದಿನಿಂದ ಅವರ ಮುಂಗೋಪವು ಅವರನ್ನು ಬಿಟ್ಟುಹೋಯಿತು.






**ಸೂ**ತಪುರಾಣಿಕನು ಶೌನಕಾದಿ ಮುನಿಗಳಿಗೆ ನಾರದನ ಪೂರ್ವೋತ್ತರಗಳನ್ನು ಕುರಿತು ಹೇಳಲಾರಂಭಿಸಿದನು.

ಪ್ರಾರಂಭದ ಜನ್ಮದಲ್ಲಿ ನಾರದನು ಒಬ್ಬ ದಾಸಿಯ ಮಗನಾಗಿ ಜನ್ಮವೆತ್ತಿದ್ದನು. ಆ ದಾಸಿ ಒಬ್ಬ ಭಾಗವತೋತ್ತಮನ ಮನೆಯಲ್ಲಿ ಚಾಕರಿ ಮಾಡಿಕೊಂಡಿದ್ದಳು.

ಆ ಮನೆಗೆ ಸದಾಕಾಲವೂ ಮುನಿಗಳೂ ಜ್ಞಾನಿಗಳೂ ಬರುತ್ತಾ ಇದ್ದು, ಗೌರವಾದರಪೂರ್ವಕವಾದ ಅತಿಥಿ ಸತ್ಕಾರಗಳನ್ನು ಹೊಂದುತ್ತಾ ಇರುವರು. ಹುಡುಗನಾದ ನಾರದನು ಅವರಿಗೆ ಅಗತ್ಯವಿರುವಾಗಲೆಲ್ಲಾ ನೀರು ತಂದುಕೊಡುತ್ತಾ, ಸೇವೆ ಸಪರ್ಯೆ ಮಾಡುತ್ತಾ, ಅವರು ಮಾತಾಡಿಕೊಳ್ಳುತ್ತಿರುವ ದೊಡ್ಡ ವಿಷಯಗಳನ್ನೂ, ವಿಷ್ಣು ಮಹಿಮೆಗಳನ್ನೂ ಆಸ್ಥೆಯಿಂದ ಆಲಿಸುತ್ತಾ ತಾನೂ ಸಾಕಷ್ಟು ಜ್ಞಾನಗಳಿಸಿಕೊಳ್ಳುತ್ತಾ ಇದ್ದನು. ನೀರು ತಂದುಕೊಡುವ ಆ ಹುಡುಗನನ್ನು "ನಾರದ" ಎಂದು ಹೆಸರಿಟ್ಟು, "ನಾರದಾ, ನಾರದಾ" ಎಂದು ಕರೆಯುತ್ತಿದ್ದರು. ಹಾಗಿರುವಾಗ ಒಂದುದಿನ ಅವನ ತಾಯಿ ಸರ್ಪದಂಶನಕ್ಕೊಳಗಾಗಿ ಸತ್ತುಹೋದಳು.

ಆ ಹುಡುಗನ ತಂದೆ ಯಾರೋ ಎಲ್ಲಿಗೆ ಹೋದನೋ ಯಾರಿಗೂ ತಿಳಿಯದು. ಅವರ ಜತೆಗಾರರಾದ ಹುಡುಗರು ನಾರದನನ್ನು ದಾಸೀಪುತ್ರನೆನ್ನುತ್ತಿದ್ದರು. ಕೆಲವರು "ದಿಕ್ಕಿಲ್ಲದ ಪರದೇಶಿ ಹುಡುಗ" ಎನ್ನುತ್ತಿದ್ದರು.

ಕಾಲಕ್ರಮದಲ್ಲಿ ಆ ಮನೆಯ ಯಜಮಾನನಾದ ಭಾಗವತೋತ್ತಮನು ಕಾಲಗತಿಯನ್ನು ಹೊಂದಿದನು. ಆಗಿನಿಂದ ನಾರದನು ನಿರಾಶ್ರಿತನಾಗಿ ತಿರುಗುತ್ತ, ಹಸಿವಿನಿಂದ ಯಾವ ಮನೆಯ ಮುಂದಾದರೂ ದೀನನಾಗಿ ನಿಂತರೆ, ಕಳ್ಳನನ್ನು ನೋಡುವಂತೆ ನೋಡಿ, ಅವನನ್ನು ಅಲ್ಲಿದ್ದವರು, ಮಹಾಪಾಪಿ ಎಂದು ನಿಂದಿಸುತ್ತಿದ್ದರು.

ನಾರದನೊಬ್ಬ ಪರಮ ಸಾಧುವಾಗಿರುವುದನ್ನು ನೋಡಿ, ಪುಂಡ ಹುಡುಗರು ಕಲ್ಲು ಬಿಸುಟು ಓಡಿಸಿ,



ಓಡುವವನನ್ನು ನೋಡಿ ನಗುತ್ತ ಆನಂದಿಸುವರು. "ನಾನು ಈ ಮನುಷ್ಯರಲ್ಲಿ ಏಕೆ ಹುಟ್ಟಿದೆನು ? ನಾನು ಏನು ತಪ್ಪುಮಾಡಿದೆನೆಂದು ಎಲ್ಲರೂ ನನ್ನನ್ನು ಇಷ್ಟು ಅನ್ಯಾಯವಾಗಿ ನೋಡುತ್ತಿದ್ದಾರೆ ? ಕ್ರಿಮಿ ಕೀಟಗಳೂ, ಕಾಡಿನಲ್ಲಿ ಮೃಗ ಪಕ್ಷಿಗಳೂ ಸಂತೋಷವಾಗಿ ಬದುಕಿಕೊಂಡಿವೆ. ಮನುಷ್ಯನಾದ ನನಗೆ ಮನುಷ್ಯರೊಳಗೇ ಇಂಥ ದುರ್ಗತಿ !" ಎಂದು ಹಳಿದುಕೊಳ್ಳುತ್ತ ನಾರದನು ಊರುಕೇರಿಗಳನ್ನು ಬಿಟ್ಟು ಅರಣ್ಯದ ದಾರಿ ಹಿಡಿದನು. ಆಗ ಅತನಿಗೆ ಮುನಿಗಳೂ, ಜ್ಞಾನಿಗಳೂ ಹೇಳಿದ ಮಾತುಗಳು ನೆನಪಿಗೆ ಬಂದುವು.

"ನಾನೇಕೆ ತಪಸ್ಸು ಮಾಡಬಾರದು ? ಶ್ರೇಷ್ಠವಾದ ದೇವಜನ್ಮವನ್ನೇ ಪಡೆಯಬೇಕು. ತಪಸ್ಸಿನಿಂದಲೇ ಅದು ಸಾಧ್ಯವಾಗಬೇಕು." ಹೀಗೆಂದುಕೊಂಡು ನಾರದನು ತಪಸ್ಸು ಮಾಡಲು ತೊಡಗಿದನು.

"ದಿಕ್ಕಿಲ್ಲದವರಿಗೆ ಯಾವನು ದಿಕ್ಕಾಗಿರುವನೋ, ಈ ಲೋಕಗಳಿಗೆಲ್ಲಾ ಯಾವನು ತಂದೆಯಾಗಿರುವನೋ, ಅವನೇ ನನಗೆ ಸರ್ವಸ್ವವೂ ಆಗಿರಲಿ. ಎಲ್ಲಾ ಅವನ ಇಷ್ಟ ! ನಾನೇನೂ ಅರಿಯೆನು" ಎಂದುಕೊಂಡು ಕಾಲಮಾನದ ಜ್ಞಾನವನ್ನೂ ಮರೆತು ಘೋರವಾದ ತಪಸ್ಸು ಮಾಡಿದನು. ಅವನನ್ನು ದೊಡ್ಡ ತೇಜಸ್ಸು ಆವರಿಸಿಕೊಂಡಿತು.

ಆ ಬಗೆಯ ಜ್ಯೋತಿಯ ರೂಪದಲ್ಲಿ ಪ್ರಸನ್ನನಾದ ವಿಷ್ಣು "ವತ್ಸಾ, ನಾರದಾ. ನೀನು ನನ್ನಲ್ಲಿ ಸೇರಿ ಹೋಗಿರುವೆ. ಇನ್ನು ನೀನು ಬ್ರಹ್ಮನ ಮಾನಸಪುತ್ರನಾಗಿ ಹುಟ್ಟುವಿ. ನಿನ್ನಲ್ಲಿ ನನ್ನ ಅಂಶವು ಸ್ಥಾಯಿಯಾಗಿರುತ್ತದೆ. ನೀನು ಚಿರಂಜೀವಿಯಾಗಿ, ತ್ರಿಕಾಲವೇದಿಯಾಗಿ ತ್ರಿಲೋಕಸಂಚಾರಿಯಾಗಿ ನನ್ನನ್ನು ಕೀರ್ತಿಸಿಕೊಂಡಿರುವುದರಲ್ಲೇ ಆನಂದ ಕಾಣುವಿ" ಎಂದು ವರವಿತ್ತು ಅನುಗ್ರಹಿಸಿದನು.

ಹಾಗೆಯೇ ನಾರದನು ವಿಷ್ಣುವಿನ ಅಂಶದೊಂದಿಗೆ, ಬ್ರಹ್ಮನ ಮಾನಸಪುತ್ರನಾಗಿ ಜನಿಸಿ, ದೇವಮುನಿಯೆಂದು ಪೂಜಿಸಲ್ಪಡುವನು. ವಿಷ್ಣುವಿನ ಲೀಲಾವತಾರಗಳಲ್ಲಿ ನಾರದನ ಅವತಾರವೂ ಒಂದೆಂದು ಹೇಳಲ್ಪಡುತ್ತದೆ.

ಅಂತಹ ನಾರದನಿಂದ ಉಪದೇಶ ಪಡೆದ ಧ್ರುವನು, ಬೇಗಬೇಗನೆ ತಪಸ್ಸಿಗೆ ಹೋಗುತ್ತಿರುವಾಗ, "ಅಣ್ಣಾ, ನಿಲ್ಲು ನಿಲ್ಲು ! ಅರಣ್ಯಕ್ಕೆ ಹೋಗಬೇಡ !" ಎಂದು ಕೂಗಿಕೊಂಡು ಉತ್ತಮನು ಅಳುತ್ತಾ, ಓಡಿಬಂದು ಧ್ರುವನಿಗೆ ಅಡ್ಡನಿಂತು, ಕೈಗಳನ್ನು ಚಾಚಿ, "ಅಣ್ಣಾ, ನೀನು ಕಾಡಿಗೆ ಹೋಗಿಬಿಟ್ಟರೆ ನಾನು ಯಾರೊಂದಿಗೆ ಆಡಲಿ ? ಯಾರೊಂದಿಗೆ ಸೇರಿ ಹರಿಭಜನೆ ಮಾಡಲಿ ? ನನ್ನ ಒಡನಾಡಿಯಾಗಿ ನಿನ್ನಂತಹ ಅಣ್ಣ ಬೇರೆಯಾರಿದ್ದಾರೆ ? ನನ್ನ ಅಮ್ಮ ನಿನ್ನನ್ನು ಹೀಯಾಳಿಸಿ ಮಾತಾಡಿದಳೆಂದು, ನನ್ನ ಮೇಲೆ ಯಾಕೆ ಕೋಪ



ಅಣ್ಣಾ ? ಹೋಗಬೇಡ, ಹಿಂದಿರುಗು ಅಣ್ಣಾ" ಎಂದು ಧಾರೆಧಾರೆಯಾಗಿ ಕಣ್ಣೀರು ಸುರಿಸಿದನು.

ಧ್ರುವನು ಉತ್ತಮನನ್ನು ಆಲಿಂಗಿಸಿ, ಬೆನ್ನುತಟ್ಟಿ "ತಮ್ಮಾ, ನಿನ್ನ ಅಮ್ಮ ನನ್ನನ್ನು ಹೀಯಾಳಿಸಿದ್ದಲ್ಲ, ಜ್ಞಾನಬೋಧೆ ಮಾಡಿದಳು. ನನ್ನ ಅಮ್ಮ ಕೂಡಾ ದೊಡ್ಡವಳೆಂದು ಅನ್ನಿಸಬೇಡವೇ ನಾನು ? ಅದಕ್ಕೇ ಹೋಗುತ್ತಿದ್ದೇನೆ. ಸ್ವಲ್ಪ ದಿನಗಳಲ್ಲಿ ನಿನಗೆಲ್ಲಾ ಸರಿಯಾಗುತ್ತದೆ" ಎಂದು ಸಮಾಧಾನ ಹೇಳಿದನು.

"ಹಾಗಾದರೆ ನಾನೂ ನಿನ್ನೊಂದಿಗೆ ಕಾಡಿಗೆ ಬರುತ್ತೇನೆ. ನೀನು ತಪಸ್ಸು ಮಾಡುವಾಗ ನಾನು ನಿನಗೆ ಅದೂ ಇದೂ ತಂದುಕೊಟ್ಟು, ಹತ್ತಿರವೇ ಇರುತ್ತೇನೆ" ಎಂದನು ಉತ್ತಮ.

"ಹಾಗೆ ಮಾಡಿದರೆ ನಿನ್ನ ಅಮ್ಮ ಅಳುತ್ತಾ ಇರುತ್ತಾಳೆ. ನಿನ್ನ ಅಣ್ಣ ನಾನು ಹೇಳುವುದನ್ನು ಕೇಳು. ಹಿಂದೆ ಹೋಗಪ್ಪ" ಎಂದನು ಧ್ರುವ.

ಆ ಮಾತು ಕೇಳಿ ಉತ್ತಮನು ಅಲ್ಲೇ ಕುಳಿತು ಅಳತೊಡಗಿದನು. ಅವನ ಹಿಂದೆಯೇ ಬಂದ ಸುರುಚಿ ಅವನನ್ನು ಎತ್ತಿಕೊಳ್ಳಲು ಪ್ರಯತ್ನಿಸುವಾಗ ಉತ್ತಮನು, "ನೀನು ನನ್ನನ್ನು ಮುಟ್ಟಬೇಡಮ್ಮ. ನಿನ್ನಿಂದಾಗಿಯೇ ಅಣ್ಣ ಕಾಡಿಗೆ ಹೋಗುತ್ತಿದ್ದಾನೆ" ಎಂದನು.

ಸುರುಚಿ ನಾಚಿಕೆಯಿಂದ ತಲೆತಗ್ಗಿಸಿ, "ನಾನೊಬ್ಬಳು ಮಹಾ ಪಾಪಿ ! ಎಲ್ಲಾ ನನ್ನಿಂದಲೇ ನಡೆಯಿತು" ಎಂದು ಪಶ್ಚಾತ್ತಾಪಪಟ್ಟಳು. ಆಗ ಉತ್ತಾನಪಾದ ರಾಜನು, "ಧ್ರುವಾ ! ಧ್ರುವಾ ! ನಿಲ್ಲಪ್ಪಾ ನಿಲ್ಲು. ಇದೆಲ್ಲಾ ನನ್ನ ಮಂದಬುದ್ಧಿಯಿಂದಲೇ ನಡೆಯಿತು. ನನ್ನ ಸಿಂಹಾಸನವೂ ನಿನ್ನದೇ. ಬಾ ಅಪ್ಪಾ, ಬಾರೋ" ಎಂದು ಗಟ್ಟಿಯಾಗಿ ಕೂಗಿ ಕರೆಯುತ್ತಾ ಅಲ್ಲಿಗೆ ಬಂದನು. ಧ್ರುವನು ಹಿಂದಿರುಗಿ ನೋಡದೆ ವೇಗವಾಗಿ ಹೋಗುತ್ತಲೇ ಇದ್ದನು.

ಉತ್ತಾನಪಾದನ ಹಿಂದೆಯೇ ಬರುತ್ತಿದ್ದ ಸುನೀತಿಯನ್ನು ನೋಡಿ, ನಾರದನು ಅವಳ ಮುಂದೆ ಕಾಣಿಸಿ, "ಅಮ್ಮಾ, ನೀನು ರತ್ನಗರ್ಭದವಳು. ನಿನ್ನ ಕುಮಾರನನ್ನು ಕುರಿತು ಏನೂ ಚಿಂತೆ ಪಡಬೇಡ. ಸಾಕ್ಷಾತ್ ನಾರಾಯಣನೇ ಅವನಿಗೆ ರಕ್ಷಕನಾಗಿರುವನು" ಎಂದು ಹೇಳಿ, ಉತ್ತಾನಪಾದನನ್ನು ನೋಡಿ, "ರಾಜಾ, ನೀನೂ ಚಿಂತಿಸಬೇಕಾಗಿಲ್ಲ. ಧ್ರುವನು ಧ್ರುವನೇ ! ಹಿಂದಿರುಗಿ ಬರುವವನಲ್ಲ. ಇದು ನಮಗೆಲ್ಲರಿಗೂ ಸಂತೋಷದಾಯಕವಾದ ಸಮಯ. ನಿನಗೆ ತಂದೆಯೂ, ಧ್ರುವನಿಗೆ ತಾತನೂ ಆದ ಸ್ವಾಯಂಭು ಮನುವಿನ ವಂಶಕ್ಕೆ ಧ್ರುವನು ಎಣೆಯಿಲ್ಲದ ಕೀರ್ತಿ ತರುತ್ತಾನೆ. ಇದಕ್ಕೆ ಯಾರಿಂದಲೂ ಏನು ಮಾಡಲೂ ಸಾಧ್ಯವಿಲ್ಲ. ಎಲ್ಲವೂ ಆ ನಾರಾಯಣನ ಸಂಕಲ್ಪವೇ" ಎಂದು ಹೇಳಿ ಎಲ್ಲರನ್ನೂ ಶಾಂತಪಡಿಸಿದನು. ಧ್ರುವನು ನಾರದನು ತೋರಿಸಿದ ದಾರಿಯಿಂದ



ಮಧುವನಕ್ಕೆ ಹೋಗಿ "ಓಂ ನಮೋನಾರಾಯ ಣಾಯ" ಎಂಬ ಅಷ್ಟಾಕ್ಷರಿಯನ್ನು ಜಪಿಸುತ್ತ ತಪಸ್ಸು ಮಾಡಲು ತೊಡಗಿದನು. ಯಮುನಾನದಿ ಶಾಂತಾರಾವದ ಶ್ರುತಿ ತೆಗೆದು ಪ್ರವಹಿಸುತ್ತಿರಲು, ಕ್ರೂರ ಮೃಗಗಳೆಲ್ಲ ಆಪ್ತಮಿತ್ರರಂತೆ ಧ್ರುವನ ಸುತ್ತಲೂ ತಿರುಗಿಕೊಂಡಿರಲು, ಧ್ರುವನ ತಪಸ್ಸು ತೀವ್ರವಾಗುತ್ತ ಆಗುತ್ತ ಮೂರು ಲೋಕಗಳನ್ನು ಗಡಗಡ ನಡುಗಿಸಲು ತೊಡಗಿತು.

ಯಾರು ಎಲ್ಲಿ ತಪಸ್ಸು ಮಾಡುತ್ತಿದ್ದರೂ, ಇಂದ್ರ ಪದವಿಯ ಆಶೆಗಾಗಿಯೇ ತಪಸ್ಸು ಮಾಡುವರೆಂದು ಹೆದರುವ ಇಂದ್ರನು, ಧ್ರುವನ ತಪಸ್ಸನ್ನು ಭಂಗ ಪಡಿಸಲು, ಭೀತಿ ಹುಟ್ಟಿಸುವ ಅನೇಕ ಇಂದ್ರಜಾಲ ಗಳನ್ನು ಮಾಡಿಸಿದನು. ತನ್ನ ವಜ್ರಾಯುಧವನ್ನು ಝುಳಪಿಸಿ ಗುಡುಗುಸಿಡಿಲು ಮಿಂಚುಗಳೊಂದಿಗೆ ಕಲ್ಮಳೆ ಸುರಿಸಿದನು. ಅವನ ಭಯ ಬೀಭತ್ಸ ಗಳಾವುದಕ್ಕೂ ಧ್ರುವನು ಕದಲಲಿಲ್ಲ. ವಿಷ್ಣುಚಕ್ರವು ಧ್ರುವನ ಸುತ್ತಲೂ ತಿರುಗುತ್ತ, ಎಲ್ಲವನ್ನೂ ದೂರದೂರ ಓಡಿಸಿಬಿಟ್ಟಿತು.

ಆಗ ಇನ್ನೇನು ಗತಿಯೆಂದು ಚಿಂತಿಸುವ ಇಂದ್ರ ನನ್ನು ನೋಡಿ ನಾರದನು "ದೇವೇಂದ್ರಾ, ಧ್ರುವ ನನ್ನು ಸಾಮಾನ್ಯ ಬಾಲಕನೆಂದು ಕೊಳ್ಳಬೇಡ. ಅವನನ್ನು ಏನು ಮಾಡಲಿಕ್ಕೂ ನಿನ್ನಿಂದ ಸಾಧ್ಯವಿಲ್ಲ. ನಿನ್ನ ಚಿಂತೆಗೂ ಅರ್ಥವಿಲ್ಲ. ಇಂದ್ರಪದವಿ ಅವನಿಗೆ ಹುಲ್ಲುಕಡ್ಡಿಯ ಸಮಾನ! ಸುಮ್ಮನಿರು" ಎಂದು ಬುದ್ಧಿ ಹೇಳಿದನು.

ಕಡೆಗೆ ಒಂದಾನೊಂದು ಶುಭದಿನ ಧ್ರುವನ ತಪಸ್ಸಿಗೆ ಮೆಚ್ಚಿ ವಿಷ್ಣು ಪ್ರತ್ಯಕ್ಷನಾದನು. ಧ್ರುವನು ವಿಷ್ಣುವಿನ ದಿವ್ಯಪಾದಗಳನ್ನು ಸುತ್ತಿ ಹಿಡಿದು ತದೇಕ ದೃಷ್ಟಿಯಿಂದ ವಿಷ್ಣುವಿನ ಮುಖ ಮಂಡಲ ವನ್ನು ನೋಡುತ್ತಾ ಅತ್ಯಾನಂದದಿಂದ ಬಾಯಿ ಯಿಂದ ಮಾತೇ ಹೊರಡದೆ ಮೂಕನಾಗಿದ್ದು ಬಿಟ್ಟನು. "ನಿನ್ನನ್ನು ಬಾಯಿ ತುಂಬಾ ಸ್ತೋತ್ರ ಮಾಡಬೇಕೆಂದಿದೆ. ನಾನು ಬಾಲಕನು. ಏನೂ ತಿಳಿಯದವನು. ಸ್ತೋತ್ರಪಾಠಗಳಾವುದೂ ತಿಳಿಯ ದವನು" ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ ಆನಂದಬಾಷ್ಪ ಸುರಿಸುತ್ತಿದ್ದನು.

ವಿಷ್ಣು ತನ್ನ ಶಂಖವನ್ನು ಧ್ರುವನ ಕಪೋಲದ ಮೇಲೆ ತಾಗಿಸಿದನು. ಮರುಕ್ಷಣದಲ್ಲಿ ಧ್ರುವನ ತಲೆ ಯೊಳಗೆ ವೇದವೇದಾಂಗಗಳ ಸಾರವೆಲ್ಲಾ ತುಂಬಿತು. ಅಸ್ಖಲಿತವಾಣಿಯಿಂದ ಧಾರಾವಾಹಿಯಾಗಿ ಹೊರಟ ದಿವ್ಯ ಸ್ತೋತ್ರಧಾರೆಯಿಂದ ವಿಷ್ಣುಪಾದವನ್ನು ಅಭಿಷೇಕ ಮಾಡಿದನು.

ವಿಷ್ಣು ಮಂದಹಾಸ ಬಿಂಬಿಸುತ್ತ "ಧ್ರುವಾ, ನಿನಗೆ ಏನು ಬೇಕು, ಕೇಳು" ಎಂದನು.

"ಓ ಪರಮಪುರುಷಾ! ಪದ್ಮವನ್ನು ಅಂಟಿ ಕೊಂಡಿರುವ ತುಂಬಿಯು ಹಾಗೆ ಸದಾ ನಿನ್ನ ಮಧುರ ಮಂದಹಾಸ ವದನ ಕಮಲವನ್ನು ನೋಡುತ್ತಾ

ಇರಬೇಕೆಂಬುದೊಂದರ ಹೊರತು, ನನಗೆ ಬೇರೆ ಯಾವ ಕೋರಿಕೆಯೂ ಇಲ್ಲ" ಎಂದನು ಧ್ರುವ.

"ಹಾಗೆಯೇ ಇರುವಿಯಂತೆ ಕಂದಾ. ಪ್ರಸ್ತುತ ನಿನ್ನ ರಾಜ್ಯಕ್ಕೆ ಹೋಗಿ ಕರ್ತವ್ಯಧರ್ಮದಂತೆ ರಾಜ್ಯಪಾಲನೆ ನಿರ್ವಹಿಸು. ಆಮೇಲೆ ನೀನು ನನ್ನ ರೂಪವಾದ ವಿಶ್ವದ ಶಿರೋಭಾಗದಲ್ಲಿರುವ ಧ್ರುವ ಪದವನ್ನು ಸೇರುವಿ. ಕಲ್ಪಾಂತರಗಳು ಗತಿಸಿಕೊಂಡಿದ್ದರೂ ಕದಲದಿರುವ ಅಚಲ ಪದವನ್ನು ಅಲಂಕರಿಸಿ ಬೆಳಗಿಕೊಂಡಿರುವಿ" ಎಂದು ಹೇಳಿ ವಿಷ್ಣು ಅಂತರ್ಧಾನನಾದನು.

ಧ್ರುವನನ್ನು ಅನುಗ್ರಹಿಸಿದ ವಿಷ್ಣುವಿನ ಜ್ಯೋತಿರ್ಮಯವಾದ ಅವತಾರವು ಧ್ರುವ ನಾರಾಯಣಾವತಾರವೆಂದು ಹೇಳಲ್ಪಡುತ್ತದೆ.

ತಪಃಸಿದ್ಧಿಯಾದ ಮೇಲೆ ಧ್ರುವನು ತನ್ನ ಮಾಹಿಷ್ಮತೀಪುರಕ್ಕೆ ಹಿಂದಿರುಗಿ ಬಂದನು. ಉತ್ತಾನಪಾದ ರಾಜನು ಸರ್ವಸಮರ್ಥನಾದ ಧ್ರುವನಿಗೆ ಪಟ್ಟಾಭಿಷೇಕ ಮಾಡಿ, ತಪಸ್ಸು ಮಾಡಲು ಅರಣ್ಯಕ್ಕೆ ಹೊರಟುಹೋದನು. ಧ್ರುವನು ಬಹಳ ಚೆನ್ನಾಗಿ ರಾಜ್ಯಪಾಲನೆ ಮಾಡಿಕೊಂಡಿದ್ದನು.

ಒಂದುಸಾರಿ ಧ್ರುವನ ಆಜ್ಞೆಯ ಮೇರೆಗೆ ಉತ್ತಮನು, ವನ್ಯ ಮೃಗಗಳ ಹಾವಳಿಯಿಂದ ಪ್ರಜೆಗಳನ್ನು ರಕ್ಷಿಸಲು ಅರಣ್ಯಕ್ಕೆ ಬೇಟೆಯಾಡಲು ಹೋದನು. ಆಗ ಹಿಮಾಲಯ ಪರ್ವತ ಪ್ರಾಂತದ ಅರಣ್ಯದಲ್ಲಿ ದುಷ್ಟರಾದ ಯಕ್ಷರು ಅವನ ಮೇಲೆ ಬಿದ್ದು ಅವನನ್ನು ಕೊಂದುಬಿಟ್ಟರು.

ಅದನ್ನು ಕೇಳಿ ಸುರುಚಿ ಪುತ್ರಶೋಕವನ್ನು ತಾಳಲಾಗದೆ, ರೋದಿಸುತ್ತಾ ಅರಣ್ಯಕ್ಕೆ ಹೋಗಿ, ಅಲ್ಲಿ ಸುತ್ತಲೂ ಹುಟ್ಟಿಕೊಂಡ ದೊಡ್ಡ ಕಾಡುಕಿಚ್ಚಿನಲ್ಲಿ ಸಿಕ್ಕಿಕೊಂಡು ಸುಟ್ಟುಹೋದಳು.

ತಮ್ಮನನ್ನು ಅನ್ಯಾಯವಾಗಿ ಕೊಂದ ಯಕ್ಷರ ಮೇಲೆ ಧ್ರುವನಿಗೆ ಕೋಪ ಬಂದಿತು. ಅವನು



ಯಕ್ಷರನ್ನು ನಿರ್ಮೂಲಿಸಲಿಕ್ಕಾಗಿ ಯಕ್ಷರ ನಗರವಾದ ಅಲಕಾಪುರವನ್ನು ಮುತ್ತಿಗೆ ಹಾಕಿದನು. ಮಾಯಾವಿಗಳಾದ ಯಕ್ಷರು ಧ್ರುವನ ಮೇಲೆ ಕ್ಷುದ್ರವಾದ ಎಷ್ಟೋ ಮಾಯಾಜಾಲಗಳನ್ನು ಪ್ರಯೋಗಿಸಿದರು. ಧ್ರುವನು ನಾರಾಯಣಾಸ್ತ್ರದಿಂದ ಅವರ ಎಲ್ಲಾ ಮಾಯಾಜಾಲಗಳನ್ನೂ ಹರಿದು ಬಿಸುಟು, ವಿಜೃಂಭಿಸಿದನು.

ಕಟ್ಟಕಡೆಗೆ ಕುಬೇರನು ಧ್ರುವನಿಗೆ ಶರಣಾಗತನಾಗಿ, ಸಮಾಧಾನಪಡಿಸಿ ಸ್ನೇಹಮಾಡಿಕೊಂಡು, ಹೇರಳ ಸಂಪದಗಳನ್ನು ಕೊಟ್ಟು ಕಳುಹಿಸಿದನು.

ಧ್ರುವನು ಅನೇಕ ಕುಮಾರರಿಗೆ ತಂದೆಯಾದನು. ಆದರ್ಶರೀತಿಯಲ್ಲಿ ರಾಜ್ಯಪಾಲನೆಯನ್ನು ನಿರ್ವಹಿಸಿ, ಸ್ವಾಯಂಭೂಮನು ವಂಶಕ್ಕೆ ಉತ್ತಮವಾದ ಕೀರ್ತಿಯನ್ನು ತಂದನು. ಚಿರಕಾಲ ರಾಜ್ಯವಾಳಿದ ಮೇಲೆ, ತನ್ನ ಹಿರಿಯ ಮಗನಿಗೆ ಪಟ್ಟಗಟ್ಟಿ, ಧ್ರುವನು ಬದರಿಕಾಶ್ರಮಕ್ಕೆ ಹೋದನು. ಅಲ್ಲಿ



ವಿಷ್ಣುವನ್ನು ಧ್ಯಾನಿಸುತ್ತಾ ಇದ್ದು ಬಂಗಾರದ ಶರೀರವನ್ನು ಪಡೆದು ದಿವ್ಯಕಾಂತಿಯಿಂದ ಬೆಳಗಿದನು.

ಅದಾದ ಮೇಲೆ ವಿಷ್ಣುವಿನ ಆದೇಶದಂತೆ ವಿಷ್ಣು ದೂತರು ಅವನಿಗಾಗಿ ದಿವ್ಯ ವಿಮಾನವನ್ನು ತಂದರು. ಅವರು ನಾಲ್ಕು ಕೈಗಳಿಂದ ವಿಷ್ಣುವಿನ ಹಾಗೆಯೇ ಬೆಳಗುತ್ತಿದ್ದರು.

ಧ್ರುವನು ಅವರೊಂದಿಗೆ, "ನನ್ನ ತಾಯಿಗೆ ಸಿಗದಿರುವ ಉನ್ನತಪದವು ನನಗೆ ಬೇಕಾಗಿಲ್ಲ" ಎಂದು ನಿರಾಕರಿಸಿದನು. ಆಗ ವಿಷ್ಣುದೂತರು ಮುಂದಾಗಿ ಧ್ರುವ ಮಂಡಲಕ್ಕೆ ದಿವ್ಯ ವಿಮಾನದಲ್ಲಿ ಹೋಗುತ್ತಿದ್ದ ಸುನೀತಿಯನ್ನು ಅವನಿಗೆ ತೋರಿಸಿದರು.

ಅದನ್ನು ನೋಡಿದ ಮೇಲೆ ಧ್ರುವನು ಸಂತೋಷ ಪಟ್ಟು ದೇವ ವಿಮಾನದಲ್ಲಿ ಏರಿದನು. ಆ ವಿಮಾನವು ಮೇಲೆ ಮೇಲೆ ಹೋಗುತ್ತ, ಗ್ರಹ ಮಂಡಲಗಳನ್ನೂ, ನಕ್ಷತ್ರ ಮಂಡಲಗಳನ್ನೂ ದಾಟಿ ಧ್ರುವಪದಕ್ಕೆ ಹೋಗಿ ತಲಪಿತು. ಧ್ರುವಪದವನ್ನೇ ವಿಷ್ಣುಪದವೆಂದೂ, ಧ್ರುವಕ್ಷಿತಿ ಎಂದೂ ಹೇಳುತ್ತಾರೆ. ವಿಷ್ಣುವಿನ ವಾಸಸ್ಥಳವಾದ ವೈಕುಂಠವು ಅಲ್ಲಿಯೇ ಇರುತ್ತದೆ. ಗೋಲೋಕವಿರುವುದೂ ಧ್ರುವಕ್ಷಿತಿಯಲ್ಲಿಯೇ. ಗೋಲೋಕದಲ್ಲಿ ವಿಷ್ಣು ಎರಡು ಕೈಗಳಿಂದ ಕೃಷ್ಣನಾಗಿ, ಪ್ರಕೃತಿಸ್ವರೂಪಿಣಿಯಾದ ರಾಧಾದೇವಿಯೊಂದಿಗೆ ಕೂಡಿ, ಆನಂದ ದಾಯಕವಾದ ವೇಣುವನ್ನು ಊದುತ್ತಾ ಆನಂದಿಸಿ ಕೊಂಡಿರುವನು. ಗೋಲೋಕಕ್ಕೆ ಮೇಲೆ ದೊಡ್ಡ ಅಂಧಕಾರದ ಪುಂಜಗಳೇ ವ್ಯಾಪಿಸಿಕೊಂಡಿರುತ್ತವೆ. ಆ ಅಂಧಕಾರದ ಆಚೆಗೆ ಮಹಾವಿಷ್ಣು ವೈಕುಂಠ ವಾಸಿಯಾಗಿ ಕ್ಷೀರಸಾಗರದ ನಡುವೆ ಬೆಳಗಿ ಕೊಂಡಿರುತ್ತಾನೆ. ಧ್ರುವನು ಸಾದಾ ವಿಷ್ಣುವನ್ನು ನೋಡುತ್ತ ಉಜ್ವಲಕಾಂತಿಯಿಂದ ಪ್ರಕಾಶಿಸುತ್ತಾನೆ. ಗೂಟಕ್ಕೆ ಕಟ್ಟಿದ ದನದ ಹಾಗೆ ಸಪ್ತರ್ಷಿ ಮಂಡಲವು ಅವನ ಸುತ್ತಲೂ ಪ್ರದಕ್ಷಿಣೆ ಮಾಡುತ್ತಿರಲು ಸಪ್ತ ನಕ್ಷತ್ರ ಗ್ರಹ ಗಣಗಳೊಂದಿಗೆ ತುಂಬಿದ ಶಿಂಶುಮಾರ ಚಕ್ರವು ಧ್ರುವನ ಕೆಳಗೆ ತಿರುಗುತ್ತಾ ಇರುತ್ತದೆ.

ಗೋಲೋಕಕ್ಕೆ ಕೆಳಗೆ ಬ್ರಹ್ಮನಿರುವ ಸತ್ಯ ಲೋಕವೂ, ಅದರ ಕೆಳಗೆ ಕ್ರಮವಾಗಿ ಜನಲೋಕ, ಮಹರ್ಲೋಕ, ಸ್ವರ್ಲೋಕ, ಭುವರ್ಲೋಕ, ಭೂಲೋಕವೆಂಬ ಏಳು ಊರ್ಧ್ವಲೋಕಗಳೂ, ಭೂಲೋಕಕ್ಕೆ ಕೆಳಗೆ ಅಧೋಲೋಕಗಳೆನಿಸುವ ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಲ ಎಂಬ ಏಳೂ ಕೂಡಿ ಒಟ್ಟು ಹದಿನಾಲ್ಕು ಲೋಕಗಳಿಗೆ ಮೇಲಿನಿಂದ, ವಿಶ್ವಶಿಖರಾಗ್ರದತಲೆಯಲ್ಲಿ ಧ್ರುವನು ದಿಕ್ಕುಗಳಿಗೆ ದಿಕ್ಕಾಗಿ, ಅಚಲಪದ ನಕ್ಷತ್ರವಾಗಿ ಬೆಳಗಿಕೊಂಡು ಎಂದೆಂದೂ ಇರುತ್ತಾನೆ.

ದೀಕ್ಷೆಯೊಂದಿದ್ದರೆ, ಸಣ್ಣದು ದೊಡ್ಡದು ಎಂಬ ತಾರತಮ್ಯವೇನಿಲ್ಲದೆ, ವಯಸ್ಸಿನ ಹೆಚ್ಚು ಕಡಿಮೆಗಳಿಲ್ಲದೆ, ಏನನ್ನಾದರೂ ಸಾಧಿಸಿ ಬಿಡಬಹುದು.

ಇದಕ್ಕೆ ಐದು ವಯಸ್ಸಿನ ಎಳಮೆಯಲ್ಲಿಯೇ ತಪಸ್ಸಿಗೆ ಹೋದ ಬಾಲಧ್ರುವನೇ ತಾರ್ಕಣೆಯಾಗಿರುವನು.

ಹೀಗೆ ಸೂತಪುರಾಣಿಕನು ಧ್ರುವನ ವೃತ್ತಾಂತವನ್ನು ಮುಗಿಸಿ, ಮತ್ತೆ ಹೇಳಲು ಪ್ರಾರಂಭಿಸಿದನು.

ಶ್ರದ್ಧಾಸಕ್ತರಾದ ಮುನಿಗಳೇ, ಮತ್ಸ್ಯವು ಕೇವಲ ಜಲಚರವಾದ ಪ್ರಾಣಿಯಾದರೆ, ಆಮೆ ನೀರಿನಲ್ಲಿಯೂ ನೆಲದಲ್ಲಿಯೂ ಜೀವಿಸಬಲ್ಲಂತಹದು.

ಅಂದರೆ ನೀರಿನಿಂದ ಪ್ರಾಣಿಕೋಟಿಗಳು ನೆಲದ ಮೇಲಕ್ಕೆ ಬಂದುವು. ಸೃಷ್ಟಿಯ ಪರಿಣಾಮವು ಜಲಚರದಶೆಯಿಂದ ಭೂಚರದಶೆಗೆ ಬಂದಿತೆಂದು ಆಮೆಯ ಅವತಾರದ ತತ್ವಾರ್ಥ.

ವಿಷ್ಣು ಅಂತಹ ಆಮೆಯಾಗಿ ಅವತಾರವೆತ್ತಿದನು. ಅದೇ ದಶಾವತಾರಗಳಲ್ಲಿ ಎರಡನೆಯದಾದ ಕೂರ್ಮಾವತಾರ.

ಒಂದುಸಾರಿ ದೇವತೆಗಳೂ, ರಾಕ್ಷಸರೂ ಕೂಡಿ, ಕ್ಷೀರಸಾಗರವನ್ನು ಕಡೆದು ಅಮೃತವನ್ನು ಪಡೆಯಬೇಕೆಂಬ ಮಹೋದ್ಯಮಕ್ಕೆ ತೊಡಗಿದರು.

"ಅಮೃತವು ಸಿದ್ಧಿಸಿಬಿಟ್ಟರೆ ಅದು ನಮ್ಮದಾಗುತ್ತದೆ." ಎಂದು ಭುಜಬಲದಲ್ಲಿಯೂ, ಸಂಖ್ಯೆಯಲ್ಲಿಯೂ ಹೆಚ್ಚಾಗಿದ್ದ ರಾಕ್ಷಸರು ಆಲೋಚನೆ ಮಾಡಿಕೊಂಡಿದ್ದರು. ರಾಕ್ಷಸರ ಆಲೋಚನೆಯಂತೆ ನಡೆದು ಬಿಟ್ಟರೆ ಒಗ್ಗಟ್ಟಿನಿಂದ ಕೆಲಸಮಾಡಿಯೂ ಫಲವು ಪೂರ್ತಿ ಅವರಿಗೆ ಹೋಗಿಬಿಡುತ್ತದೆಂದು, ದೇವತೆಗಳಿಗೆ ಗೊತ್ತಾಯಿತು.

"ರಾಕ್ಷಸರಿಗೆ ಮಾತ್ರ ಅಮರತ್ವ ಸಿದ್ಧಿಸಿಬಿಟ್ಟರೆ ನಮಗೇನು ಲಾಭ? ಬದಲಾಗಿ ಅವರ ಕಾಟವೇ ಹೆಚ್ಚುತ್ತದೆ. ಇದಕ್ಕೆ ತಕ್ಕ ಪ್ರತೀಕಾರ ಮಾಡುವ ಭಾರ ಮಹಾವಿಷ್ಣುವಿಗೇ ಸರಿ" ಎಂದು ದೇವತೆಗಳು ವಿಷ್ಣುವನ್ನೇ ನಂಬಿ ಕಾರ್ಯಕ್ಕೆ ಇಳಿದರು.

ಹಾಲಿನ ಸಮುದ್ರದಲ್ಲಿ ಮಂದರ ಪರ್ವತವನ್ನು ಕಡಗೋಲಾಗಿ ನಿಲ್ಲಿಸಿ, ವಾಸುಕಿ ಎಂಬ ಮಹಾ ಸರ್ಪವನ್ನು ನೇಣಾಗಿ ಅದಕ್ಕೆ ಸುತ್ತಿ ಕಡೆಯಬೇಕೆಂಬ ನಿರ್ಣಯವಾಯಿತು. ಆದರೆ ಮಂದರ ಪರ್ವತವನ್ನು ತಂದು ಹಾಲ ಸಮುದ್ರದಲ್ಲಿ ಎತ್ತಿಹಾಕುವ ಕೆಲಸ ಯಾರಿಂದಲೂ ಸಾಧ್ಯವಾಗಲಿಲ್ಲ. ಆಗ ವಿಷ್ಣುವೇ ಅನುಗ್ರಹಿಸಿ ಆ ಕೆಲಸ ಮಾಡಿದನು. ಅದರಿಂದ ವಿಷ್ಣುವಿಗೆ ಗಿರಿಧಾರಿ ಎಂಬ ಹೆಸರು ಬಂತು.

ರಾಕ್ಷಸರು ತಾವು ವಾಸುಕಿಯ ತಲೆಯ ಭಾಗವನ್ನೇ ಹಿಡಿಯುತ್ತೇವೆಂದು ಹಟ ಹಿಡಿದರು. ಹಾಗೆಯೇ ಒಪ್ಪಿಕೊಳ್ಳಿರೆಂದು ದೇವತೆಗಳಿಗೆ ವಿಷ್ಣು ಹೇಳಿದನು. ದೇವತೆಗಳು ವಾಸುಕಿಯ ಬಾಲದ ಭಾಗದಲ್ಲಿ ಹಿಡಿದುಕೊಂಡಾಗ, ವಿಷ್ಣು ಕೂಡಾ ಎಲ್ಲರಿಗಿಂತ ಕೊನೆಯಲ್ಲಿ ನಿಂತು, ವಾಸುಕಿಯ ಬಾಲದ ತುದಿಯನ್ನು ಹಿಡಿದನು. ಹೀಗೆ ಕ್ಷೀರಸಾಗರಮಥನವು ಪ್ರಾರಂಭವಾಯಿತು.





# ಪ್ರಶ್ನೆಗಳ ಪರಿಹಾರ

ಒಂದಾನೊಂದು ಕಾಲದಲ್ಲಿ, ವಿಂಧ್ಯಾರಣ್ಯದ ಸಮೀಪವಿದ್ದ ಚಿಕ್ಕದೊಂದು ಗ್ರಾಮದಲ್ಲಿ ಶಂಭು ಎಂಬೊಬ್ಬ ಗಟ್ಟಿಗನಾದ ಯುವಕನಿದ್ದನು. ಅವನು ಗುಡ್ಡದ ತಪ್ಪಲಿನ ಭೂಮಿಯಲ್ಲಿ ಕಷ್ಟಪಟ್ಟು ವ್ಯವಸಾಯ ಮಾಡಿ, ಹಾಗೂ ಹೀಗೂ ತನ್ನ ಮುದುಕಿಯಾದ ತಾಯಿಯನ್ನು ಪೋಷಿಸಿಕೊಂಡಿದ್ದನು, ದಿನಾ ಕಷ್ಟಪಡುತ್ತಿದ್ದ ಅವನಿಗೆ ಒಂದು ಸಂದೇಹ ತಲೆ ಹಾಕಿತು. ತನ್ನ ಈಡು ಜೋಡಿನವರೆಲ್ಲ ತನ್ನ ಹಾಗೆಯೇ ಕಷ್ಟಪಡುತ್ತಿದ್ದರೂ ತನಗಿಂತ ಹೆಚ್ಚು ಧನವಂತರಾಗುತ್ತಾ ಬರುತ್ತಿದ್ದಾರೆ, ತಾನು ಮಾತ್ರ ವರ್ಷದುದ್ದಕ್ಕೆ ಕಷ್ಟಪಡುತ್ತಿದ್ದರೂ ತನ್ನ ಹೊಟ್ಟೆ, ತಾಯಿಯ ಹೊಟ್ಟೆಗಳು ಕೂಡಾ ಸರಿಯಾಗಿ ತುಂಬುವುದಿಲ್ಲವೇಕೆ ? ಧನಿಕನಾಗುವುದಂತೂ ಆ ಮೇಲಿನ ಮಾತು. ಇದಕ್ಕೆ ಎಷ್ಟು ಯೋಚಿಸಿದರೂ ಅವನಿಗೆ ಉತ್ತರೆ ಹೊಳೆಯಲಿಲ್ಲ,

ಆ ಪ್ರಾಂತದಲ್ಲಿರುವವರು "ಏನಾದರೂ ಅನುಮಾನ ಬಂದರೆ ಅಂಗೀರಸ ಮಹಾಮುನಿಯನ್ನು ಕೇಳು" ಎಂದು ಹೇಳುವುದೊಂದು ಸಾಮತಿಯಂತೆ ವಾಡಿಕೆಯಾಗಿತ್ತು. ಈ ಅಂಗೀರಸ ಮಹಾಮುನಿ ಬಹು ದೂರದಲ್ಲಿರುವ ನಾಸಿಕದ ಹತ್ತಿರ ಬೆಟ್ಟದಲ್ಲಿ ತಪಸ್ಸು ಮಾಡಿಕೊಂಡಿದ್ದಾನಂತೆ.

ಶಂಭು ತನ್ನ ಅನುಮಾನವನ್ನು ಕುರಿತು ಅಂಗೀರಸನನ್ನು ಕೇಳಬೇಕೆಂದೇ ನಿಶ್ಚಯಿಸಿದನು.. ನಿಶ್ಚಯಿಸಿದ ಮೇಲೆ ಅವನು ತಾಯಿಯೊಂದಿಗೆ, "ಅಮ್ಮಾ. ನಾನು ನಾಸಿಕಕ್ಕೆ ಹೋಗಿ ಬರುತ್ತೇನೆ. ಅಂಗೀರಸ ಮಹಾಮುನಿಯನ್ನು ನೋಡಿ, ನನ್ನ ಸಂದೇಹವನ್ನು ನಿವೃತ್ತಿ ಮಾಡಿಕೊಂಡು ಬರುತ್ತೇನೆ" ಎಂದನು. ಅಷ್ಟು ದೂರ ಹೋಗಬೇಡವೆಂದು ತಾಯಿ ಎಷ್ಟು ಹೇಳಿದರೂ ಕೇಳದೆ ನಾಸಿಕಕ್ಕೆ ಹೊರಟೇ ಬಿಟ್ಟನು ಶಂಭು.

ಅವನು ಹೋಗುತ್ತಾ ಒಂದು ನಿರ್ಜನ ಪ್ರದೇಶದಲ್ಲಿ ಒಂದು ಗುಡಿಸಲು ಮನೆ ಕಂಡಿತು. ಹಸಿವಿನ ಕಾಟ ಜೋರಾಗಿದ್ದುದರಿಂದ, ಶಂಭು ಆ ಗುಡಿಸಲಿಗೆ ಹೋಗಿ, ಅಲ್ಲಿದ್ದ ಅವ್ವಳನ್ನು ನೋಡಿ, "ಅವ್ವಾ ನನಗಿಷ್ಟು ಊಟ ಹಾಕುವಿಯಾ ? ದೂರದಿಂದ ಬರುತ್ತಿದ್ದೇನೆ" ಎಂದನು.

ಅವ್ವ ಅವನಿಗೆ ಊಟಬಡಿಸಿ, "ಅಪ್ಪಾ, ನೀನು ಎಷ್ಟು ದೂರದಿಂದ ಬರುತ್ತೀ ? ಎಷ್ಟು ದೂರದ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ವರೆಗೆ ಹೋಗುತ್ತೀ ? ಏನು ಕೆಲಸದ ಮೇಲೆ ಹೋಗುತ್ತೀ ?" ಎಂದು ವಿಚಾರಿಸಿದಳು.

"ದೂರದ ಹಳ್ಳಿಯಿಂದ ಬೆಳಂಜಾಮಕ್ಕೆ ಎದ್ದು ಹೊರಟಿದ್ದೇನೆ. ನಾನು ಎಷ್ಟು ಕಷ್ಟಪಟ್ಟರೂ ನನ್ನ ದಾರಿದ್ರ್ಯ ತೀರುವುದಿಲ್ಲ. ಅದೇಕೆಂದು ಅಂಗೀರಸ ಮಹಾಮುನಿಯನ್ನು ಕೇಳಲು ಹೊರಟಿದ್ದೇನೆ" ಎಂದನು ಶಂಭು,

"ಹಾಗಾದರೆ ಆ ಮುನಿಗಳ ಹತ್ತಿರ ಇನ್ನೊಂದು ಸಂಗತಿ ಕೂಡಾ ಕೇಳಪ್ಪ. ಹದಿನೆಂಟು ವರ್ಷ ಪ್ರಾಯದ ನನ್ನ ದೊ ಡ್ಡ ಮ್ಮ ಗ ಳು ತುಂಬಾ ಚೆಂದಾಗಿದ್ದಾಳೆ. ಆದರೆ ಅವಳು ಈ ವರೆಗೂ ಮಾತೇ ಆಡಲಿಲ್ಲ. ಯಾವ ವೈದ್ಯರೂ, ಮಂತ್ರದಾದಿಗಳೂ ಅವಳನ್ನು ಗುಣಪಡಿಸಲಾರದೆ ಹೋದರು. ಅವಳ ಮೂಗತನವು ಹೋಗಬೇಕಾದರೆ ಏನು ಮಾಡ ಬೇಕೆಂದು ಕೂಡಾ ಸ್ವಲ್ಪ ಅವರನ್ನು ಕೇಳಿಬಿಡಪ್ಪ" ಎಂದಳು ಅವ್ವ.

ಶಂಭು ಸರಿ ಎಂದು ಅಲ್ಲಿಂದ ಹೊರಟು ನಡೆಯಲು ಪ್ರಾರಂಭಿಸಿದನು. ಹೋಗುತ್ತಾ ಇರಲು ಒಂದು ಊರಿನ ಹೊರಭಾಗದಲ್ಲಿ, ಅದನಿಗೊಂದು ಮನೆ ಕಾಣಿಸಿತು. ಅವನು ಆ ಮನೆಯ ಮುಂದೆ ನಿಂತು, ಮನೆಯೊಡೆಯನನ್ನು ನೋಡಿ, "ಅಯ್ಯಾ, ದೂರದಿಂದ ಬರುತ್ತಿದ್ದೇನೆ" ಬಹಳ ಹಸಿವೆಯಾಗಿದೆ, ಒಂದು ಮುಷ್ಟಿ ಅನ್ನ ಹಾಕುವಿರಾ ?" ಎಂದು ಕೇಳಿದನು.

ಆ ಮನೆಯವನು ಶಂಭುವಿಗೆ ತನ್ನೊಂದಿಗೇ ಕುಳ್ಳಿರಿಸಿ ಊಟ ಮಾಡಿಸಿ, "ಎಲ್ಲಿಗೆ ಹೊರಟಿರುವೆ ಯಪ್ಪಾ ? ಏನು ಕೆಲಸದ ದೇಲೆ ಈ ಪ್ರಯಾಣ?" ಎಂದು ಕೇಳಿದನು.

"ನಾನು ಎಷ್ಟು ಕಷ್ಟಪಟ್ಟರೂ ನನ್ನ ಬಡತನದ ಕಷ್ಟವು ತೀರುವುದಿಲ್ಲ. ನಾಸಿಕದ ಹತ್ತಿರ ಬೆಟ್ಟ ದಲ್ಲಿರುವ ಅಂಗೀರಸ ಮಹಾಮುನಿಯ ಹತ್ತಿರ ಕಾರಣ ಕೇಳಿ ತಿಳಿದುಕೊಳ್ಳಬೇಕೆಂದು ಹೀಗೆ ಹೊರಟಿದ್ದೇನೆ" ಎಂದನು ಶಂಭು.

"ಹಾಗೇನು ? ಸ್ವಲ್ಪ ನನ್ನದೊಂದು ಸಂಗತಿ ಯನ್ನೂ ಕೇಳಿ ಬರುವಿಯಾ ? ನನ್ನ ಮನೆಹಿಂದಿನ ತೋಟದಲ್ಲಿ ಒಳ್ಳೇ ಜಾತಿಯ ನಿಂಬೆಯ ಗಿಡವಿದೆ. ಗಿಡವು ಬೆಳೆದು ಮರವಾಗುತ್ತಿದ್ದರೂ ಒಂದೇ ಒಂದು ಮಿಡಿ ಕೂಡಾ ಬರಲಿಲ್ಲ. ಅಂಗೀರಸ ಮುನಿಯ ಹತ್ತಿರ ಇದನ್ನು ಹೇಳಿ ಕಾರಣ ತಿಳಿದುಕೊಂಡು ಬರುವೆಯಾ ?" ಎಂದು ಕೇಳಿದನು ಗೃಹಸ್ಥ.

ಸರಿಯೆಂದು ಶಂಭು ಅಲ್ಲಿಂದ ಹೊರಟು ಪ್ರಯಾಣ ಮಾಡುತ್ತ, ಅರಣ್ಯದೊಳಗಿಂದಾಗಿ ಹೋಗುವಾಗ, ಅಲ್ಲಿ ಒಂದು ಆಶ್ರಮವಿರುವುದನ್ನು ನೋಡಿದನು.

ಶಂಭು ಆಶ್ರಮದೊಳಗಿನ ಮುನಿಯನ್ನು ನೋಡಿ, "ಸ್ವಾಮಿ, ನಾನೊಬ್ಬ ಪ್ರಯಾಣಿಕ. ತುಂಬಾ ಹಸಿವೆ ಯಾಗಿದೆ, ಆ ಹಾ ರ ವೇ ನಾ ದ ರೂ ಇದ್ದರೆ ಕೊಡುವಿರಾ ?" ಎಂದು ಕೇಳಿದನು.

ಮುನಿ ಅವನಿಗೆ ಫಲಮೂಲಾದಿಗಳನ್ನು ತಿನ್ನಲು ಕೊಟ್ಟು, "ನೀನು ಏನು ಕೆಲಸದ ಮೇಲೆ ಎಲ್ಲಿಗೆ ಹೊರಟಿದ್ದೀಯಪ್ಪಾ ?" ಎಂದು ಕೇಳಿದನು.

"ನಾನು ಎಷ್ಟು ಕಷ್ಟಪಟ್ಟರೂ ನಮ್ಮ ದಾರಿದ್ರ್ಯವು ಏಕೆ ತೀರುವುದಿಲ್ಲವೆಂದು ಅಂಗೀರಸ ಮಹಾಮುನಿಯನ್ನು ಕೇಳಿ ತಿಳಿಯಬೇಕೆಂದು ಹೊರಟಿದ್ದೇನೆ. ಆ ಮಹನೀಯರು ನಾಸಿಕದ ಬೆಟ್ಟದಲ್ಲಿ ಇದ್ದಾರಂತೆ" ಎಂದನು ಶಂಭು.

"ಹಾಗಾದರೆ ಅವರ ಹತ್ತಿರ ನನ್ನದೊಂದು ಅನುಮಾನ ಕೂಡಾ ಕೇಳುವೆಯಾ ? ನಾನು ಕೆಲವು ಸಿದ್ಧಿಗಳಿಗೋಸ್ಕರವಾಗಿ ಬಹಳ ಕಾಲದಿಂದ ತಪಸ್ಸಾಧನೆ ಮಾಡುತ್ತಿದ್ದೇನೆ. ಆದು ಸ್ವಲ್ಪವೂ ಸಿದ್ಧಿಸುವಂತೆ ಕಾಣುವುದಿಲ್ಲ. ಅದರ ಕಾರಣವೇನೆಂದು ಕೇಳಿ ತಿಳಿದುಕೊಂಡು ಬಂದು ನನಗೆ ಹೇಳುವಿಯಾ?" ಎಂದನು ಮುನಿ.

ಶಂಭು ಒಪ್ಪಿಕೊಂಡು ಅಲ್ಲಿಂದ ಹೊರಟು ಅನೇಕ ದಿನಗಳ ವರೆಗೆ ಪ್ರಯಾಣ ಮಾಡಿ, ಅಂಗೀರಸ ಮಹಾಮುನಿ ಇರುವ ಬೆಟ್ಟವನ್ನು ತಲಪಿದನು. ಆ ಮಹಾಮುನಿ ಶಂಭುವನ್ನು ಬಹಳ ಆದರದಿಂದ ಬರಮಾಡಿಕೊಂಡು, ತಿಂಡಿ ತೀರ್ಥಗಳಿಂದ ಅವನ ದಣಿವು ಪರಿಹರಿಸಿದ ಮೇಲೆ, ಬಂದ ಕಾರ್ಯ ವೇನೆಂದು ಕೇಳಿದನು.

"ಮಹಾತ್ಮರೇ, ನಾನು ನಾಲ್ಕು ಸಂದೇಹಗಳನ್ನು ಕುರಿತು ಪ್ರಶ್ನೆ ಕೇಳಿ, ತಮ್ಮಿಂದ ಉತ್ತರ ಪಡೆಯಬೇಕೆಂದು ಬಂದಿದ್ದೇನೆ. ಅನುಗ್ರಹಿಸಬೇಕು" ಎಂದನು ಶಂಭು.

"ನಾನು ಒಬ್ಬನಿಗೆ ಮೂರು ಪ್ರಶ್ನೆಗಳಿಗೆ ಮಾತ್ರ ಉತ್ತರ ಕೊಡುವ ನಿಯಮವನ್ನು ಇಟ್ಟುಕೊಂಡಿದ್ದೇನೆ, ಕಂದಾ. ನಿನ್ನ ಸಂದೇಹಗಳಲ್ಲಿ ಒಂದನ್ನು ಬಿಟ್ಟು, ಉಳಿದುವನ್ನು ಹೇಳು. ಅವುಗಳಿಗೆ ತಕ್ಕ ಉತ್ತರ ಹೇಳುತ್ತೇನೆ" ಎಂದನು ಅಂಗೀರಸ ಮಹಾಮುನಿ.

ಶಂಭು ಸ್ವಲ್ಪ ಆಲೋಚನೆ ಮಾಡಿ, ಎಲ್ಲಾ ಸಂದೇಹಗಳಿಗಿಂತ ತನ್ನದೇ ಸತ್ವವಿಲ್ಲದ ಸಂದೇಹ ಎಂಬ ನಿರ್ಧಾರಕ್ಕೆ ಬಂದನು.





ತರುವಾಯ ಅವನು ಮುದುಕಿಯ ಮೂಕ ಮೊಮ್ಮಗಳನ್ನು ಕುರಿತು, ಗೃಹಸ್ಥನ ಮನೆಯ ನಿಂಬೇ ಗಿಡದ ಗೊಡ್ಡುತನವನ್ನು ಕುರಿತು, ಸಿದ್ಧಿಸದಿರುವ ಮುನಿಯ ತಪಸ್ಸನ್ನು ಕುರಿತು ಪ್ರಶ್ನೆ ಕೇಳಿ ಅಂಗೀರಸ ಮಹಾಮುನಿ ಹೇಳಿದ ಪ್ರತ್ಯುತ್ತರವನ್ನು ಕೇಳಿ ನೆನಪಿಟ್ಟುಕೊಂಡನು.

ಹೀಗೆ ಅಲ್ಲಿಂದ ಹಿಂದಿರುಗುತ್ತಾ ಶಂಭು. ಮೊದಲು ಮುನಿಯ ಆಶ್ರಮಕ್ಕೆ ಬಂದನು. ಅವನನ್ನು ನೋಡಿ ಮುನಿ ಆತುರದಿಂದ, "ಅಂಗೀರಸ ಮಹಾಮುನಿ ನನ್ನ ಪ್ರಶ್ನೆಗೆ ಏನು ಹೇಳಿದರಪ್ಪಾ ?" ಎಂದು ಕೇಳಿದನು.

"ಅಯ್ಯಾ, ನಿಮ್ಮ ತಲೆಯಲ್ಲಿ ಯಾವುದೋ ಪಕ್ಷಿ ಒಂದು ಮಣಿಯನ್ನು ಹಾಕಿದೆಯಂತೆ. ನಿಮ್ಮ ತಪಸ್ಸಿನ ಶಕ್ತಿಯನ್ನೆಲ್ಲಾ ಆ ಮಣಿಯೇ ಆಕರ್ಷಿಸುತ್ತದಂತೆ, ಅದನ್ನು ನೀವು ಕಿತ್ತುಬಿಟ್ಟರೆ, ಬಹುಬೇಗದಲ್ಲಿ ನಿಮ್ಮ ತಪಸ್ಸು ಸಿದ್ದಿಸುತ್ತದೆ ಎಂದರು ಅಂಗೀರಸ ಮಹಾ ಮುನಿಗಳು" ಎಂದನು.

ಮುನಿ ಆಶ್ಚರ್ಯದಿಂದ ತನ್ನ ಜಟಾಜೂಟವನ್ನು ಬಿಡಿಸಿಕೊಡರಿ ತಡವಿದಾಗ ಒಂದು ಮಣಿ ಕೈಗೆ ಸಿಕ್ಕಿತು. ಅದನ್ನು ತೆಗೆದು ಆ ಮುನಿ ಶಂಭುವಿಗೇ ಕೊಟ್ಟು, "ಇದನ್ನು ನೀನೇ ಇಟ್ಟುಕೋ ಅಪ್ಪಾ. ಇನ್ನು ನನಗೆ ಬೇಕಾದ ಸಿದ್ಧಿಗಳನ್ನು ನಾನೇ ಸಂಪಾದಿಸಿ ಕೊಳ್ಳುತ್ತೇನೆ" ಎಂದನು ಸಂತೋಷದಿಂದ.

ಶಂಭು ಆ ಮುನಿಯ ಅಪ್ಪಣೆ ಪಡೆದು ಗೃಹಸ್ಥ ನಿರುವಲ್ಲಿಗೆ ಹೋದನು.

"ನನ್ನ ಕೊರತೆಯನ್ನು ಅಂಗೀರಸ ಮಹಾ ಮುನಿಯ ಹತ್ತಿರ ಕೇಳಿದೆಯೇನಪ್ಪಾ ? ಏನು ಹೇಳಿದರು ?" ಎಂದು ಗೃಹಸ್ಥನು ಆತುರದಿಂದ ಕೇಳಿದನು.

"ಅಯ್ಯಾ, ಕೇಳಿದೆ, ನಿಮ್ಮ ನಿಂಬೇ ಮರದ ಕೆಳಗೆ ನೆಲದೊಳಗೆ ಒಂಬತ್ತು ಬಿಂದಿಗೆಗಳಲ್ಲಿ ತುಂಬಾ ಬಂಗಾರದ ನಗನಾಣ್ಯಗಳಿವೆಯಂತೆ. ಅವುಗಳನ್ನು ಮೇಲೆ ತೆಗೆದುಬಿಟ್ಟರೆ ನಿಂಬೇಮರ ಚೆನ್ನಾಗಿ ಒಂದಕ್ಕೆರಡಾಗಿ ಫಲಿಸುವುದಂತೆ" ಎಂದನು ಶಂಭು.

ಈ ರಹಸ್ಯ ಇತರರಿಗೆ ತಿಳಿಯುವುದು ಅಷ್ಟು ಒಳ್ಳೆಯದಲ್ಲವೆಂದುಕೊಂಡು, ಆ ಗೃಹಸ್ಥನು ಆ ದಿನ ರಾತ್ರಿ ಶಂಭುವಿನ ಸಹಾಯದಿಂದ ನಿಂಬೇ ಮರದ ಬುಡದಲ್ಲಿ ಅಗೆದನು. ನಿಜವಾಗಿಯೇ ಒಂಬತ್ತು ಬಂಗಾರ ತುಂಬಿದ ಬಿಂದಿಗೆಗಳು ಸಿಕ್ಕಿದುವು.

"ಅಪ್ಪಾ. ನನಗೆ ಬಹಳ ಉಪಕಾರ ಮಾಡಿದಿ. ಈ ಬಿಂದಿಗೆಗಳಲ್ಲಿ ನಿನಗೆ ಎಷ್ಟು ಸಾಧ್ಯವೋ ಅಷ್ಟು ತೆಗೆದುಕೋ" ಎಂದನು.

ಶಂಭು ಒಂದು ಬಿಂದಿಗೆಯೇ ಯಥೇಷ್ಟವಾಯಿ ತೆಂದು ಹೇಳಿ ಒಂದನ್ನು ಮಾತ್ರ ತೆಗೆದುಕೊಂಡನು. ಅಲ್ಲಿಂದ ಹೊರಟ ಅವನು ಮುಂದೆ ನಡೆದು ಅವ್ವಳ ಗುಡಿಸಲನ್ನು ತಲಪಿದನು.

"ಬಂದೆಯಾ ಕಂದಾ, ನನ್ನ ಮೊಮ್ಮಗಳ ವಿಷಯ ಅಂಗೀರಸ ಮಹಾಮುನಿಯನ್ನು ಕೇಳಿದೆಯಾ ?

ಅವರು ಏನು ಹೇಳಿದರಪ್ಪಾ?" ಎಂದು ಅವ್ವ ಆತುರದಿಂದ ಪ್ರಶ್ನಿಸಿದಳು.

"ಕೇಳಿದೆ ಅವ್ವಾ, ನಿನ್ನ ಮೊಮ್ಮಗಳಿಗೆ ಹಿಡಿಸಿದ ವರನು ಕಣ್ಣಿಗೆ ಬಿದ್ದ ಕೂಡಲೇ ತನ್ನಂತಾನೇ ಮಾತಾಡುತ್ತಾಳೆಂದು ಅಂಗೀರಸ ಮಹಾಮುನಿಗಳು ಹೇಳಿದರು" ಎಂದನು ಶಂಭು.

ಸರಿಯಾಗಿ ಅದೇ ಸಮಯಕ್ಕೆ ಅವ್ವಳ ಮೊಮ್ಮಗಳು ಅಲ್ಲಿಗೆ ಬಂದಳು. ಶಂಭುವನ್ನು ನೋಡಿದ ಕೂಡಲೇ, ಅವಳ ಗಲ್ಲಗಳು ಕೆಂಪಾದುವು. ಅವಳು ಅವ್ವಳೊಂದಿಗೆ, "ಇವರು ಯಾರು ಅವ್ವಾ? ಎಲ್ಲಿಂದ ಬಂದಿದ್ದಾರೆ?" ಎಂದು ಕೇಳಿದಳು.

ಅವ್ವ ಅತ್ಯಾಶ್ಚರ್ಯದಿಂದ "ನಿಜಕ್ಕೂ ನೀನು ಮಾತಾಡಿದಿಯಾ? ಅಯ್ಯೋ ನನ್ನಮ್ಮ! ನನ್ನ ಬಂಗಾರ! ಅರರೇ! ಈ ಹುಡುಗನೇ ನಿನ್ನ ಗಂಡನೇ? ಈ ದಿನವೇ ನಿಮ್ಮ ಮದುವೆ ಮಾಡಿಸುತ್ತೇನೆ. ಅಂಗೀರಸ ಮಹಾಮುನಿಗಳು ಹೇಳಿದರೆಂದರೆ ಬೇರೆ ಮಾತೇ ಇಲ್ಲ!" ಎಂದಳು ಅತ್ಯಾನಂದದಿಂದ.

ಆ ಪ್ರಕಾರವೇ ಶಂಭು ಆ ಹುಡುಗಿಯನ್ನು ಮದುವೆ ಮಾಡಿಕೊಂಡು ಅವಳನ್ನೂ, ಬಂಗಾರದ ಬಿಂದಿಗೆಯನ್ನೂ, ಮಣಿಯನ್ನೂ ತನ್ನೊಂದಿಗೆ ತೆಗೆದುಕೊಂಡು ಕ್ಷೇಮವಾಗಿ ತನ್ನ ಮನೆಗೆ ಬಂದು ಸೇರಿದನು.

ಇಷ್ಟರೊಳಗೆ ಶಂಭುವಿನ ತಾಯಿ ಮಗನಿಗಾಗಿ ಅತ್ತು ಅತ್ತು ಕಣ್ಣು ಕಳೆದುಕೊಂಡು ಕುರುಡ ಳಾಗಿದ್ದಳು, ಮಗನ ಕಂಠ ಧ್ವನಿಯನ್ನು ಕೇಳಿ ಆನಂದಿ ಸಿದಳೇ ಹೊರತು, ಅವನನ್ನು ಕಣ್ಣಿನಿಂದ ನೋಡ ಲಾಗದೆ ಹೋದಳು, ತನ್ನ ಸೊಸೆಯನ್ನೂ ಮುಟ್ಟಿ ಮುಟ್ಟಿ ನೋಡಿ ಆನಂದ ಪಟ್ಟಳು.

ಶಂಭು ಮಣಿಯನ್ನು ತೆಗೆದು ತಾಯಿಯ ಕಣ್ಣಿನ ಹತ್ತಿರ ತೋರಿಸುತ್ತಾ, "ಈ ಜಗಜಗಿಸುವ ಮಣಿ ಯಾದರೂ ಕಾಣುತ್ತದೆಯೇ ಅಮ್ಮಾ?" ಎಂದು ಕೇಳಿದನು.

ತಾಯಿ ಆ ಮಣಿಯನ್ನು ತೆಗೆದುಕೊಂಡು ತನ್ನ ಕಣ್ಣಿನ ತೀರ ಹತ್ತಿರ ಹಿಡಿದು, "ಕಾಣುವುದಿಲ್ಲವಲ್ಲಾ ಮಗಾ" ಎಂದಳು. ಆಗ ಅವಳ ಕುರುಡು ಕಣ್ಣಿಗೆ ಮಣಿ ತಾಗಿ ಬಿಟ್ಟಿತು,

ಮರುಕ್ಷಣದಲ್ಲಿ ಅವಳ ಕಣ್ಣುಗಳು ಯಥಾಪ್ರಕಾರ ಸರಿಯಾಗಿ ಬಿಟ್ಟುವು. ಮುನಿಯ ತಪಸ್ಸನ್ನೆಲ್ಲಾ ನುಂಗಿ ಕೊಂಡ ಆ ಮಣಿ ಬಹಳ ಮಹಿಮೆಯುಳ್ಳದ್ದೆಂದು ಶಂಭುವಿಗೆ ಗೊತ್ತಾಯಿತು, ಅದರ ಸಹಾಯದಿಂದ ಯಾವ ಕಷ್ಟವೂ ಇಲ್ಲದಂತೆ ನೋಡಿಕೊಳ್ಳುತ್ತ, ಬಂಗಾರದ ಬಿಂದಿಗೆಯಿಂದ ತನ್ನ ಅಭಿಲಾಷೆಗಳನ್ನು ನೆರವೇರಿಸಿಕೊಳ್ಳುತ್ತ, ಶಂಭು ತನ್ನ ಹೆಂಡತಿಯೊಂದಿಗೆ ಬಹಳ ಕಾಲ ಸುಖವಾಗಿ ಜೀವನ ನಡೆಸಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೮೩ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.








P. R. Shinde

Devidas Kasbekar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಏಪ್ರಿಲ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂ. ೫೦ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಫೆಬ್ರವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಓಡುವ ಈ ಗಾಡಿ ಸುಳ್ಳೂರಿಗೆ

ಎರಡನೇ ಫೋಟೋ : ಸುಳ್ಳೇನಲ್ಲಾ, ನಿಜಕ್ಕೂ ನೀರಿಗೆ

ಕಳುಹಿಸಿದವರು : ಬಿ. ಮಾಲತಿ, ಆರ್. ಟಿ. ಓ. ಆಫೀಸು, ಮಂಗಳೂರು. (ದ. ಕ.)

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.